KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಅಕ್ಟೋಬರ್ ೨೮, ೨೦೧೦ (ಕಾರ್ತಿಕ ೬, ಶಕವರ್ಷ ೧೯೩೨) | ಸಂಚಿಕೆ ೪೨ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಫ್.ಯು. ನಾಯಕವಾಡಿ, ಸರ್ಕಾರಿ ಅಭಿಯೋಜಕರು, ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಿಜಾಪುರ ಇವರ ವಿರುದ್ಧದ ಇಲಾಖಾ ವಿಚಾರಣೆಯಲ್ಲಿ ವಿಧಿಸಿದ ದಂಡನೆಯನ್ನು ಹಿಂದೆ ಪಡೆವ ಬಗ್ಗೆ

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ ಒಇ 165 ಪಿಪಿಇ 05 ದಿನಾಂಕ 22.06.2006
2. ಕೆಎಟಿ ಆದೇಶ ಸಂಖ್ಯೆ 1304/07 ದಿನಾಂಕ: 23.10.2009
3. ಸರ್ಕಾರಿ ವಕೀಲರ ಪತ್ರ ಸಂ:20697/AG/KAT/09–10 ದಿನಾಂಕ: 21.12.2009.
4. ಕಾನೂನು ಇಲಾಖೆ ಅವರ ಕಾರ್ಯದರ್ಶಿ–1 ಇವರ ಟಿಪ್ಪಣಿ ಸಂ: Law/Alss-1/313/2010 ದಿನಾಂಕ: 25.02.2010.

**ಪ್ರಸ್ತಾವನೆ :**

ಶ್ರೀ ಎಫ್.ಯು. ನಾಯಕವಾಡಿ, ಸರ್ಕಾರಿ ಅಭಿಯೋಜಕರು ಇವರು ಬೆಳಗಾವಿ ನಗರದ ಸಂ. 1915ರ ನಿವೇಶನದಲ್ಲಿ ಸಕ್ಷಮ ಪ್ರಾಧಿಕಾರದ ಅನುಮತಿ ಪಡೆಯದೇ ಗೃಹನಿರ್ಮಾಣ ಕಾರ್ಯ ಪ್ರಾರಂಭಿಸಿರುವ, ಬೆಳಗಾವಿ ನಗರದ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದಿಂದ ಸಕ್ಷಮ ಪ್ರಾಧಿಕಾರದ ಅನುಮತಿ ಪಡೆಯದೇ ರೂ. 4,00,000–00 ಸಾಲ ಪಡೆದಿರುವ ಮತ್ತು ಬೆಂಗಳೂರು ದಕ್ಷಿಣ ತಾಲ್ಲೂಕು ಕೃಷ್ಣರಾಜಪುರ ಹೋಬಳಿ, ಥಣಿಸಂದ್ರ ಗ್ರಾಮದ ಮನೆ ಸಂ. 2397ನ್ನು ರೂ. 5,00,000–00ಕ್ಕೆ ಮಾರಾಟ ಮಾಡಲು ಅನುಮತಿ ಪಡೆದು ರೂ. 2,56,000ಕ್ಕೆ ಮಾರಾಟ ಮಾಡಿ ರೂ. 2,44,000 ಅನಧಿಕೃತವಾಗಿ ಪಡೆದಿರುವ ಆರೋಪಗಳ ಸಂಬಂಧ ಕರ್ನಾಟಕ ಸರ್ಕಾರ ಸೇವಾ (ವರ್ಗೀಕರಣ, ನಿಯಂತ್ರಣ, ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(iii)ರ ಅನುಸಾರ ದಂಡನೆಯನ್ನು ವಿಧಿಸಿ, ಕೂಡಲೇ ಜಾರಿಗೆ ಬರುವಂತೆ ಮುಂದಿನ 2 ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮರಹಿತವಾಗಿ ತಡೆಹಿಡಿಯುವ ದಂಡನೆಯನ್ನು ಮೇಲೆ (1)ರಲ್ಲಿ ಓದಲಾಗಿರುವ ದಿನಾಂಕ 22.06.2006ರಲ್ಲಿ ಆದೇಶ ಹೊರಡಿಸಲಾಗಿದೆ.

ಈ ಸಂಬಂಧ ಅಧಿಕಾರಿಯು ಕೆ.ಎ.ಟಿ.ಯಲ್ಲಿ ಅರ್ಜಿ ಸಂ: 1304/07 ಸಲ್ಲಿಸಿದ್ದು ಮೇಲೆ (2)ರಲ್ಲಿ ಓದಲಾಗಿರುವ ದಿನಾಂಕ 23.10.2009ರ ತೀರ್ಪಿನಲ್ಲಿ ಕೆ.ಎ.ಟಿ.ಯು ಅಧಿಕಾರಿಯ ಅರ್ಜಿಯನ್ನು ಪುರಸ್ಕರಿಸಿ ತಡೆಹಿಡಿಯಲ್ಪಟ್ಟ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ, ವೇತನವನ್ನು ಪುನಃ ನಿಗದಿಪಡಿಸಲು ಹಾಗೂ ಅದಕ್ಕೆ ಸಂಬಂಧಿಸಿದಂತೆ ವೇತನ ಬಾಕಿಯನ್ನು ಬಿಡುಗಡೆಗೊಳಿಸಲು ಆದೇಶಿಸಿರುತ್ತದೆ.

ಮೇಲೆ (3)ರಲ್ಲಿ ಓದಲಾಗಿರುವ ದಿನಾಂಕ 21.12.2009ರ ಸರ್ಕಾರಿ ವಕೀಲರ ಪತ್ರದಲ್ಲಿ ಇದು ಮೇಲ್ಮನವಿ ಸಲ್ಲಿಸಲು ಅರ್ಹ ಪ್ರಕರಣವಲ್ಲವೆಂದು ಅಭಿಪ್ರಾಯ ನೀಡಿರುತ್ತಾರೆ.

ಮೇಲೆ (4)ರಲ್ಲಿ ಓದಲಾಗಿರುವ ದಿನಾಂಕ: 25.02.2010ರ ಟಿಪ್ಪಣಿಯಲ್ಲಿ ಕಾನೂನು ಇಲಾಖೆ ಅಪರ ಕಾರ್ಯದರ್ಶಿ–1 ಇದು ಮೇಲ್ಮನವಿ ಸಲ್ಲಿಸಲು ಅರ್ಹ ಪ್ರಕರಣವಲ್ಲವೆಂದು ಅಭಿಪ್ರಾಯ ನೀಡಿರುತ್ತಾರೆ.

ಕೆ.ಎ.ಟಿ.ಯ ತೀರ್ಪು ಮತ್ತು ಸರ್ಕಾರಿ ವಕೀಲರ ಹಾಗೂ ಕಾನೂನು ಇಲಾಖೆ ಅಪರ ಕಾರ್ಯದರ್ಶಿ–1ರ ಅಭಿಪ್ರಾಯಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 165 ಪಿಪಿಇ 2005, ಬೆಂಗಳೂರು, ದಿನಾಂಕ 1ನೇ ಜುಲೈ 2010**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರವು ಶ್ರೀ ಎಫ್.ಯು. ನಾಯಕವಾಡಿ, ಸರ್ಕಾರಿ ಅಭಿಯೋಜಕರು, ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಿಜಾಪುರ ಅವರನ್ನು ಕ್ರಮಾಂಕ ಒಇ 165 ಪಿಪಿಇ 05 ದಿನಾಂಕ 22.06.2006ರ ಆದೇಶದಲ್ಲಿ ವಿಧಿಸಿದ ದಂಡನೆಯನ್ನು ಹಿಂದೆ ಪಡೆದಿದೆ. ಇವರು ಒಂದು ವೇಳೆ ಇಲಾಖಾ ವಿಚಾರಣೆ ನಡೆಸಿ ದಂಡನೆ ವಿಧಿಸದಿದ್ದರೆ ಯಾವ ಎಲ್ಲಾ ಸೌಲಭ್ಯ ಪಡೆಯುತ್ತಿದ್ದರೋ ಆ ಎಲ್ಲಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಪಿ.ಆರ್. 1740

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ,
(ಕಾ ಮತ್ತು ಸು ಕಾಫಿಪೋಸ ಮತ್ತು ಅಭಿಯೋಗ)

## ಶಿಕ್ಷಣ ಸಚಿವಾಲಯ

**ವಿಷಯ :** ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯನ್ನು ಪುನರ್‌ರಚಿಸುವ ಕುರಿತು.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಇಡಿ 04 ಎಸ್‌ಎಕ್ಸ್‌ಎಂ 2005. ದಿನಾಂಕ: 06–04–2005.

2. ನಿರ್ದೇಶಕರು [ಪರೀಕ್ಷೆಗಳು] ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ಇವರ ಪತ್ರ ಸಂಖ್ಯೆ ಎ8–ಮಂ,ಸ.ನೇ–46–ಭಾಗ/09–10, ದಿನಾಂಕ: 16.10.2009.

**ಪ್ರಸ್ತಾವನೆ :**

ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಗೆ ಅಧ್ಯಕ್ಷರು ಹಾಗೂ ಸದಸ್ಯರುಗಳನ್ನು ಮೇಲೆ(1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ನೇಮಕ ಮಾಡಲಾಗಿದೆ. ಇದರ ಕಾಲಾವಧಿಯು 03 ವರ್ಷಗಳಾಗಿದ್ದು, 2008ಕ್ಕೆ ಈ 03 ವರ್ಷಗಳ ಕಾಲಾವಧಿಯು ಪೂರ್ಣಗೊಂಡಿರುತ್ತದೆ. ಆದುದರಿಂದ ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯನ್ನು ಪುನರ್‌ರಚಿಸಲು ಮೇಲೆ [2] ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, [ಪರೀಕ್ಷೆಗಳು] ಇವರು ಪ್ರಸ್ತಾವನೆಯನ್ನು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರಿಗೆ ಸಲ್ಲಿಸಿರುತ್ತಾರೆ. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರು ನಿಯಮಾನುಸಾರ ಪರಿಶೀಲಿಸಿ, ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ, ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯ ಅಧಿನಿಯಮ 1966ರ ಸೆಕ್ಷನ್ 4 ರನ್ವಯ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯನ್ನು ರಚಿಸಲು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 203 ಎಸ್‌ಒಹೆಚ್ 2009, ಬೆಂಗಳೂರು, ದಿನಾಂಕ 15ನೇ ಜೂನ್ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯನ್ನು ಕೆಳಕಂಡಂತೆ ಪುನರ್‌ರಚಿಸಿ ಆದೇಶಿಸಿದೆ.

| | | |
|---|---|---|
| 1 | ಅಧ್ಯಕ್ಷರು | ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು |
| 2 | ಮಂಡಳಿಯ ಕಾರ್ಯಕಾರಿ ಉಪಾಧ್ಯಕ್ಷರು | ನಿರ್ದೇಶಕರು [ಪರೀಕ್ಷೆಗಳು] ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ, ಮಲ್ಲೇಶ್ವರಂ, ಬೆಂಗಳೂರು. |

**ಸದಸ್ಯರು**

| | | |
|---|---|---|
| 1 | ಸಾರ್ವಜನಿಕ ಶಿಕ್ಷಣ ಇಲಾಖೆಯ ಒಬ್ಬ ಉಪ ನಿರ್ದೇಶಕರು | ಉಪ ನಿರ್ದೇಶಕರು [ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಬಾಗಲಕೋಟೆ |

**ನಿರ್ದೇಶಕರುಗಳು**

| | |
|---|---|
| ಅ | ಆಯುಕ್ತರು/ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು. |
| ಆ | ನಿರ್ದೇಶಕರು, [ಪ್ರೌಢ ಶಿಕ್ಷಣ] ಸಾರ್ವಜನಿಕ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು. |
| ಇ | ಆಯುಕ್ತರು/ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಗುಲ್ಬರ್ಗ. |
| ಈ | ಆಯುಕ್ತರು/ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ. |
| ಉ | ನಿರ್ದೇಶಕರು, ಡಿ.ಎಸ್.ಇ.ಆರ್.ಟಿ. ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು. |

**ಪ್ರೌಢಶಾಲೆಗಳನ್ನು ಪ್ರತಿನಿಧಿಸುವವರು**

| | | | |
|---|---|---|---|
| ಅ | ಪ್ರೌಢಶಾಲಾ ಮುಖ್ಯಸ್ಥರು | 1 | ಶ್ರೀ ಎಸ್.ಆರ್. ಶಿರಗುಂಬಿ, ಮುಖ್ಯ ಶಿಕ್ಷಕರು, ಎಂ.ಎಂ.ಎಂ. ಪ್ರೌಢಶಾಲೆ, ಜಗಳೂರು ರಸ್ತೆ, ದಾವಣಗೆರೆ |
| | | 2 | ಶ್ರೀಮತಿ ಉಮಾ ವಿ.ಇ.ಮುಖ್ಯ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ತಾಂಡವಪುರ, ನಂಜನಗೂಡು ತಾಲ್ಲೂಕು, ಮೈಸೂರು ಜಿಲ್ಲೆ |
| ಆ | ಸಹ ಶಿಕ್ಷಕರು | 1 | ಶ್ರೀ ಎಸ್.ಬಿ. ಕಡಕೋಳದವರ, ಸಹ ಶಿಕ್ಷಕರು ವಿದ್ಯಾರಣ್ಯ ಪ್ರೌಢಶಾಲೆ, ಧಾರವಾಡ. |
| | | 2 | ಶ್ರೀ ಪ್ರಕಾಶ್ ಶೆಟ್ಟಿ, ಸರ್ಕಾರಿ ಪ್ರೌಢಶಾಲೆ, ಬಿಸಗೋಡ, ಯಲ್ಲಾಪುರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ. |
| ಇ | ಬಿ.ಇಡಿ. ಕಾಲೇಜಿನ ಪ್ರಾಂಶುಪಾಲರು | 1 | ಶ್ರೀ ಉಮೇಶ್, ಹೆಚ್.ಹೆಚ್. ಪ್ರಾಂಶುಪಾಲರು, ಶಾರದಾ ವಿಲಾಸ ಬಿ.ಎಡ್. ಕಾಲೇಜು, ಕೃಷ್ಣಮೂರ್ತಿಪುರಂ, ಮೈಸೂರು. |

| | | | |
|---|---|---|---|
| ಈ | ಶಿಕ್ಷಣ ತಜ್ಞರು | 1 | ಶ್ರೀ ಡಿ. ಮಹದೇವಪ್ಪ, ನಿವೃತ್ತ ಮುಖ್ಯ ಶಿಕ್ಷಕರು, ನಂ. 86, ಶಾಂತಿನಗರ, ಎಂ.ಎಸ್.ಕೆ.ಮಿಲ್ ರಸ್ತೆ, ಗುಲ್ಬರ್ಗ. |
| | | 2 | ಪ್ರೊ: ವಿ.ಎನ್.ಭಟ್, ಸುವಿಧಾ, ಎನ್.ಆರ್.ಪುರ ರಸ್ತೆ, ವಿದ್ಯಾನಗರ, ಶಿವಮೊಗ್ಗ. |
| | | 3 | ಡಾ॥ ದಯಾವತಿ, ಕನ್ನಡ ಉಪನ್ಯಾಸಕರು, ಪದವಿ ಪೂರ್ವ ಕಾಲೇಜು, ತರೀಕೆರೆ, ಚಿಕ್ಕಮಗಳೂರು ಜಿಲ್ಲೆ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1741

**[ಹೆಚ್.ಟಿ. ಜಯರಾಂ]**

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ [ಪ್ರೌಢ]

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎಸ್.ವೈ. ಮೋಹನ್ ಪಿ.ಎಸ್.ಐ., ನಗರ ಪೊಲೀಸ್ ಠಾಣೆ, ಕೋಲಾರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು ಕೋಲಾರ ಜಿಲ್ಲೆ, ಇವರ ಆದೇಶ ಸಂಖ್ಯೆ: ಪನ್ಸಿ 02/2009 ಓ.ಬಿ. 14/2009 ದಿನಾಂಕ: 03–02–09.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು 41/ಪನ್ಸಿ/2009–10 ಓ.ಬಿ. ಸಂ: 34/09–10 ದಿನಾಂಕ: 29–5–2009
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 23–10–09
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)61/2009–10 ದಿನಾಂಕ: 28–5–10.

**ಪ್ರಸ್ತಾವನೆ :**

ಶ್ರೀ ಎಸ್.ವೈ. ಮೋಹನ್ ಪಿ.ಎಸ್.ಐ., ಇವರು ಕೋಲಾರ ನಗರ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ ತೋರಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

> "ಕೋಲಾರ ನಗರದಲ್ಲಿ ಹೆಚ್ಚಾಗಿ ಸರಣಿ ಕಳ್ಳತನ ನಡೆಯುತ್ತಿದ್ದಾಗ್ಯೂ ಸಹ ಯಾವುದೇ ಮುಂಜಾಗ್ರತಾ ಕ್ರಮವನ್ನು ಕೈಗೊಳ್ಳದೇ ಹಾಗೂ ಮೇಲಾಧಿಕಾರಿಗಳು ಸೂಚಿಸಿದ ಸೂಚನೆಗಳನ್ನು ಪಾಲಿಸದೇ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ ತೋರ್ಪಡಿಸಿರುವ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಕೋಲಾರ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 03–02–09ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಆರು ತಿಂಗಳ ಕಾಲ ಮುಂದೂಡಿ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 29–06–09ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಯಾವುದೇ ಹೊಸ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 201 ಪೊಸಿಅ 2009, ಬೆಂಗಳೂರು, ದಿನಾಂಕ 29–6–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ವೈ. ಮೋಹನ್ ಪಿ.ಎಸ್.ಐ., ನಗರ ಪೊಲೀಸ್ ಠಾಣೆ, ಕೋಲಾರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1742

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಕೊಪ್ಪಳ ಜಿಲ್ಲೆ ಕುಷ್ಟಗಿ ತಾಲ್ಲುಕು ಮೇಣದಾಳ ಗ್ರಾಮದ ಜಿನುಗು ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 04/01/10 ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2009–10/40.

**ಪ್ರಸ್ತಾವನೆ :**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ಮೇಣದಾಳ ಗ್ರಾಮದ ಜಿನುಗು ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 25/9/2003
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 15/02/2007

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಕುಷ್ಟಗಿ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ. ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ:ಆರ್‌ಡಿ 225 ಎಲ್‌ಸಿಜಿ 2009, ದಿನಾಂಕ 19/08/2009ರಲ್ಲಿ ಅಭಿಪ್ರಾಯ ನೀಡಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ.

| ಕ್ರ. ಸಂ. | ಎಲ್‌ಎಸಿ ಸಂಖ್ಯೆ | ಮೇಣದಾಳ ಗ್ರಾಮದ ಸ.ಸಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 526/08 | 14 | 4–04 | 1236928 |
| 2 | 550/08 | 18/ಎ2 | 1–00 | 307630 |
| | ಒಟ್ಟು | | | 1544558 |

- ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 36 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ 02ನೇ ಜುಲೈ 2010**

ಕೊಪ್ಪಳ ಜಿಲ್ಲೆ ಕುಷ್ಟಗಿ ತಾಲ್ಲೂಕು ಮೇಣದಾಳ ಗ್ರಾಮದ ಜಿನುಗು ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಮೇಣದಾಳ ಗ್ರಾಮದ ಮೇಲ್ಕಂಡ ಸರ್ವೆ ನಂಬರ್‌ಗಳಿಗೆ ಸೇರಿದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಹಾಕಿದ ಪರಿಹಾರ ಧನ ಮೊತ್ತ ರೂ. 15,44,558–00ಗಳನ್ನು (ಹದಿನೈದು ಲಕ್ಷದ ನಲವತ್ತಾಲ್ಕು ಸಾವಿರದ ಐನೂರ ಐವತ್ತೆಂಟು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1743

**ಹೆಚ್.ಎಸ್. ಉದಯ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಇಂಧನ ಸಚಿವಾಲಯ

**ವಿಷಯ :** ಮೆ॥ ಶ್ರೀ ಆಂಜನೇಯ ಪವರ್-ಟೆಕ್ ಪ್ರೈವೇಟ್ ಲಿಮಿಟೆಡ್ ಇವರ 800 ಕಿಲೋ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಗೆ ಕಾಲಾವಕಾಶ ವಿಸ್ತರಣೆ ಮಾಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ: ಡಿಇ 89 ಎನ್‌ಸಿಇ 2002 ದಿನಾಂಕ: 8.05.2002.
2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಶೋಕಾಸ್ ನೋಟೀಸ್/2010 ದಿನಾಂಕ: 17.04.2010.
3) ಕಾರಣ ಕೇಳುವ ನೋಟೀಸು ಸಂಖ್ಯೆ: ಇಎನ್ 172 ಎನ್‌ಸಿಇ 2010 ದಿನಾಂಕ: 26.04.2010.
4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಜವಳಗೆರೆ ಕಿ.ಜ.ವಿ./2010/1160 ದಿನಾಂಕ: 22/29.04.2010.
5) ಮೆ॥ ಶ್ರೀ ಆಂಜನೇಯ ಪವರ್-ಟೆಕ್ ಪ್ರೈವೇಟ್ ಲಿಮಿಟೆಡ್ ಇವರ ಪತ್ರ ಸಂಖ್ಯೆ: ಆಂಜನೇಯ/ಇಎನ್/069/2010 ದಿನಾಂಕ: 05.05.2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ ಶ್ರೀ ಆಂಜನೇಯ ಪವರ್-ಟೆಕ್ ಪ್ರೈವೇಟ್ ಲಿಮಿಟೆಡ್ ಇವರಿಗೆ ರಾಯಚೂರು ಜಿಲ್ಲೆಯ ಸಿಂಧನೂರು ಬಳಿ ಡಿ-54 ಟಿ.ಎಲ್.ಬಿ.ಸಿ. ಕೆನಾಲ್‌ನ 628ನೇ ಚೈನೇಜ್‌ನಲ್ಲಿ 800 ಕಿಲೋ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಅಭಿವೃದ್ಧಿದಾರರ ಅನುಷ್ಠಾನದ ಅವಧಿಯು ಸರ್ಕಾರದ ಆದೇಶದಂತೆ ಪೂರ್ಣಗೊಂಡಿದ್ದು, ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿಯನ್ನು ಸಾಧಿಸದೇ ಇರುವುದರಿಂದ ಹಾಗೂ ಕಾಲಾವಕಾಶ ವಿಸ್ತರಣೆಯನ್ನು ಮಾಡಿಕೊಳ್ಳದೇ ಇರುವ ಹಿನ್ನೆಲೆಯಲ್ಲಿ ಮೆ॥ ಶ್ರೀ ಆಂಜನೇಯ ಪವರ್-ಟೆಕ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆ ಆದೇಶವನ್ನು ಏಕೆ ರದ್ದುಪಡಿಸಬಾರದೆಂದು ಮೆ॥ ಶ್ರೀ ಆಂಜನೇಯ ಪವರ್-ಟೆಕ್ ಪ್ರೈವೇಟ್ ಲಿಮಿಟೆಡ್ ಇವರಿಗೆ ನೋಟೀಸನ್ನು ಸ್ವೀಕರಿಸಿದ 15 ದಿನಗಳೊಳಗಾಗಿ ಉತ್ತರ ನೀಡುವಂತೆ ತಿಳಿಸಲಾಗಿತ್ತು.

*ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ॥ ಶ್ರೀ ಆಂಜನೇಯ ಪವರ್-ಟೆಕ್ ಪ್ರೈವೇಟ್ ಲಿಮಿಟೆಡ್ ಇವರು ಯೋಜನೆಗೆ ಬೇಕಾಗುವಂತಹ ಅನುಮೋದನೆಗಳನ್ನು ಪಡೆದುಕೊಂಡು ಅನುಷ್ಠಾನಗೊಳಿಸುತ್ತಿದ್ದ ಸಮಯದಲ್ಲಿ ಯೋಜನೆಯು ಒಂದು ದೊಡ್ಡ ದುರಂತಕ್ಕೆ ಗುರಿಯಾಗಿ ಟಿ.ಬಿ ಡ್ಯಾಂನಿಂದ ಸೂಚನೆಯಿಲ್ಲದೆ ಬಿಡುಗಡೆಯಾದ ಬಹಳ ಪ್ರಮಾಣದ ನೀರಿನಿಂದ ಮುಳುಗಡೆಯಾಗಿ ಯೋಜನೆಯ ಅನುಷ್ಠಾನವು ಕುಂಠಿತವಾಗಿರುತ್ತದೆ. ಈ ದುರಂತವನ್ನು ಸರಿಪಡಿಸಿಕೊಂಡು, ಪ್ರಸ್ತುತ ಕಂಪನಿಯವರು ಇತರೆ ಇಲಾಖೆಗಳಿಂದ ಪಡೆದ ಅನುಮೋದನೆ ಹಾಗೂ ಪ್ರಗತಿಯ ಬಗ್ಗೆ ವಿವರಗಳನ್ನು ನೀಡಿದ್ದು, ಯೋಜನೆಯ ಅನುಷ್ಠಾನವು ಬಹುತೇಕ ಶೇಕಡ 95 ರಷ್ಟು ಪೂರ್ಣಗೊಂಡಿದ್ದು, ಇನ್ನು ಚಾಲನೆ (ಖಿಟಿಬ್ಖಿಡಿಠಿಟುದಚಿಣುಠಟಿ) ಮಾತ್ರ ಉಳಿದಿರುತ್ತದೆಂದು ವರದಿ ನೀಡಿ, ಮೆ॥ ಶ್ರೀ ಆಂಜನೇಯ ಪವರ್-ಟೆಕ್ ಪ್ರೈವೇಟ್ ಲಿಮಿಟೆಡ್ ಇವರ 800 ಕಿಲೊ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನದ ಕಾಲಾವಧಿಯು ದಿನಾಂಕ: 30.09.2009ಕ್ಕೆ ಅಂತ್ಯಗೊಂಡಿದ್ದು, ಅವಧಿಯನ್ನು ದಿನಾಂಕ: 1.10.2009 ರಿಂದ 30.09.2010ರವರೆಗೆ ವಿಸ್ತರಿಸಲು ಶಿಫಾರಸ್ಸು ಮಾಡಿರುತ್ತಾರೆ.*

*ಮೇಲೆ ಓದಲಾದ ಕ್ರಮ ಸಂಖ್ಯೆ (5)ರಲ್ಲಿ ಮೆ॥ ಆಂಜನೇಯ ಪವರ್-ಟೆಕ್ ಪ್ರೈವೇಟ್ ಲಿಮಿಟೆಡ್ ಇವರು ನೀಡಿರುವ ಉತ್ತರವನ್ನು ಪರಿಶೀಲಿಸಿದಾಗ, ಈ ಕೆಳಗಿನ ಅಂಶಗಳನ್ನು ಗಮನಿಸಲಾಗಿದೆ.*

1. *ನೀರಾವರಿ ಕ್ಲಿಯರೆನ್ಸ್ ಆಗಿರುತ್ತದೆ.*
2. *ಕೆ.ಪಿ.ಟಿ.ಸಿ.ಎಲ್. ಇವ್ಯಾಕ್ಯುಯೇಷನ್ ಆಗಿದೆ.*
3. *ಕೆ.ಪಿ.ಟಿ.ಸಿ.ಎಲ್. ನೊಂದಿಗೆ ಪಿ.ಪಿ.ಎ. ಮಾಡಿಕೊಂಡಿರುತ್ತಾರೆ.*
4. *ಪರಿಸರ ಮಾಲಿನ್ಯ ನಿಯಂತ್ರಣ ಮಂಡಳಿಯ ಅನುಮೋದನೆ ಆಗಿರುತ್ತದೆ.*
5. *ಡಿ.ಪಿ.ಆರ್.ನ್ನು ಕ್ರೆಡಲ್‌ರವರು ಕ್ಲಿಯರೆನ್ಸ್ ಮಾಡಿರುತ್ತಾರೆ.*
6. *ಸಿವಿಲ್ ವರ್ಕ್ಸ್ ಮತ್ತು ಎಲೆಕ್ಟ್ರೋ ಮೆಕ್ಯಾನಿಕಲ್ ಕೆಲಸಗಳು ಶೇಕಡ 100ರಷ್ಟು ಆಗಿರುತ್ತದೆ.*

*ಒಟ್ಟಾರೆಯಾಗಿ ಗಮನಿಸಿದಾಗ ಅಭಿವೃದ್ಧಿದಾರರು ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಸಾಧಿಸಿರುವ ಪ್ರಗತಿ ಸಮಾಧಾನಕರವಾಗಿರುತ್ತದೆ. ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಅಭಿವೃದ್ಧಿದಾರರು ಸತತವಾಗಿ ಕ್ರಮವಹಿಸುತ್ತಿದ್ದು, ಅಭಿವೃದ್ಧಿದಾರರು ಸಾಧಿಸಿರುವ ಪ್ರಗತಿಯನ್ನು ಗಣನೆಗೆ ತೆಗೆದುಕೊಂಡು ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಧಿ ವಿಸ್ತರಿಸುವ ಕುರಿತು ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ.*

**ಸರ್ಕಾರದ ಆದೇಶ ಸಂಖ್ಯೆ: ಇಎನ್ 172 ಎನ್‌ಸಿಇ 2010, ಬೆಂಗಳೂರು, ದಿನಾಂಕ 2-07-2010**

ಮೆ॥ ಶ್ರೀ ಆಂಜನೇಯ ಪವರ್-ಟೆಕ್ ಪ್ರೈವೇಟ್ ಲಿಮಿಟೆಡ್ ಇವರಿಗೆ ರಾಯಚೂರು ಜಿಲ್ಲೆಯ ಸಿಂಧನೂರು ಬಳಿ ಡಿ-54 ಟಿ.ಎಲ್.ಬಿ.ಸಿ. ಕೆನಾಲ್‌ನ 628ನೇ ಚೈನೇಜ್‌ನಲ್ಲಿ ಹಂಚಿಕೆಯಾಗಿದ್ದ 800 ಕಿಲೋ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು ಕಾಲಾವಕಾಶವನ್ನು ದಿನಾಂಕ: 1.10.2009 ರಿಂದ 30.09.2010ರ ಅವಧಿಗೆ ವಿಸ್ತರಿಸಲಾಗಿದೆ.

ಈ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1744

**ಎಸ್.ಜೆ. ಸಂಪತ್ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಜಸ್ಟೀಸ್ ಶ್ರೀ ವಿ.ಪಿ. ಮೋಹನ್ ಕುಮಾರ್, ವಿಚಾರಣಾಧಿಕಾರಿ ಇವರ ಮುಂದೆ ಸರ್ಕಾರದ ಪರವಾಗಿ ಪ್ರತಿನಿಧಿಸಲು ವಕೀಲರನ್ನು *Standing Counsel* ಆಗಿ ನೇಮಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 125 ಪಿಪಿಸಿ 2009 ದಿನಾಂಕ: 13.10.2009, 03.02.2010 ಮತ್ತು 14.06.2010.
2) ಹೆಚ್ಚುವರಿ ಅಡ್ವೋಕೇಟ್ ಜನರಲ್ ಇವರ ಪತ್ರ ದಿನಾಂಕ: 12.05.2010 ಮತ್ತು 15.06.2010.
3) ಜಸ್ಟೀಸ್ ಶ್ರೀ ವಿ.ಪಿ. ಮೋಹನ್ ಕುಮಾರ್, ವಿಚಾರಣಾಧಿಕಾರಿ ಇವರ ಕೊಠಡಿಯಲ್ಲಿ ದಿನಾಂಕ: 03.05.2010 ರಂದು ನಡೆದ ಸಭೆಯ ನಡವಳಿ.

**ಪ್ರಸ್ತಾವನೆ :**

ಮೇಲೆ ಓದಲಾದ ಸರ್ಕಾರಿ ಆದೇಶ (1)ರಲ್ಲಿ ಉಚ್ಛ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶರಾದ ಜಸ್ಟೀಸ್ ಶ್ರೀ ವಿ.ಪಿ. ಮೋಹನ್ ಕುಮಾರ್‌ರವರನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತದಲ್ಲಿ ಕಲ್ಲಿದ್ದಲ್ಲನ್ನು ಖರೀದಿಸುವಲ್ಲಿ ಹಾಗೂ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದಲ್ಲಿ ಪವರ್ ಟ್ರಾನ್ಸ್‌ಫಾರ್ಮರ್ ಖರೀದಿಸುವಲ್ಲಿ ನಡೆದಿರುವ ಅಕ್ರಮಗಳ ಬಗ್ಗೆ ವಿಚಾರಣೆಯನ್ನು ನಡೆಸಲು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ ಮತ್ತು ಸರ್ಕಾರಿ ಆದೇಶ ಸಂಖ್ಯೆ: ಇಎನ್ 125 ಪಿಪಿಸಿ 2009 ದಿನಾಂಕ 03.02.2010 ರಲ್ಲಿ ವಿಚಾರಣೆಯ ಕಾಲಾವಧಿಯನ್ನು ದಿನಾಂಕ: 13.01.2010 ರಿಂದ ಮುಂದಿನ 6 ತಿಂಗಳವರೆಗೆ ವಿಸ್ತರಿಸಲಾಗಿತ್ತು. ತದನಂತರ ಸರ್ಕಾರಿ ಆದೇಶ ದಿನಾಂಕ: 14.06.2010 ರಲ್ಲಿ ವಿಚಾರಣೆಯ ಕಾಲಾವಧಿಯನ್ನು ದಿನಾಂಕ: 31.12.2010 ರವರೆಗೆ ವಿಸ್ತರಿಸಲಾಗಿದೆ.

ಮೇಲೆ ಓದಲಾದ (2) ರಲ್ಲಿ ಹೆಚ್ಚುವರಿ ಅಡ್ವೋಕೇಟ್ ಜನರಲ್ ಇವರು ಮಾನ್ಯ ಕಾನೂನು ಸಚಿವರಿಗೆ ದಿನಾಂಕ: 12.05.2010 ರಂದು ಬರೆದಿರುವ ಪತ್ರದಲ್ಲಿ ಮತ್ತು ಇಂಧನ ಇಲಾಖೆಗೆ ದಿನಾಂಕ: 15.06.2010 ರ ಪತ್ರದಲ್ಲಿ ಜಸ್ಟೀಸ್ ಶ್ರೀ ವಿ.ಪಿ. ಮೋಹನ್ ಕುಮಾರ್, ವಿಚಾರಣಾಧಿಕಾರಿ ಇವರ ಮುಂದೆ ಸರ್ಕಾರದ ಪರವಾಗಿ ಪ್ರತಿನಿಧಿಸಲು ಶ್ರೀ ಮಧುಸೂದನ ಅಡಿಗ, ವಕೀಲರು, ಮನೆ ನಂ: 406, ದುರ್ಗಾ ನಿಲಯ, 60 ಅಡಿ ರಸ್ತೆ, ಚೊಕ್ಕಸಂದ್ರ, ದಾಸರಹಳ್ಳಿ ಅಂಚೆ, ಬೆಂಗಳೂರು ಇವರನ್ನು Standing Counsel ಆಗಿ ನೇಮಿಸುವಂತೆ ಕೋರಿರುತ್ತಾರೆ.

ಮೇಲೆ ಓದಲಾದ (3) ರ ನಡವಳಿಯಲ್ಲಿ ಜಸ್ಟೀಸ್ ಶ್ರೀ ವಿ.ಪಿ. ಮೋಹನ್ ಕುಮಾರ್, ವಿಚಾರಣಾಧಿಕಾರಿ ಇವರು ತಮ್ಮ ಪತ್ರದಲ್ಲಿ ದಿನಾಂಕ: 03.05.2010 ರಂದು ನಡೆದ ಸಭೆಯ ನಡವಳಿಯ ಪ್ರತಿಯನ್ನು ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಟ್ಟಿರುತ್ತಾರೆ. ನಡವಳಿಯಲ್ಲಿ Standing Counsel ನ್ನು ನೇಮಿಸುವ ಅವಶ್ಯಕತೆಯ ಬಗ್ಗೆ ಪರಿಶೀಲಿಸಲು ಪ್ರಸ್ತಾಪಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 125 ಪಿಪಿಸಿ 2009, ಬೆಂಗಳೂರು, ದಿನಾಂಕ 2–07–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಜಸ್ಟೀಸ್ ವಿ.ಪಿ. ಮೋಹನ್ ಕುಮಾರ್, ವಿಚಾರಣಾಧಿಕಾರಿ ಇವರ ಮುಂದೆ ಸರ್ಕಾರದ ಪರವಾಗಿ ಪ್ರತಿನಿಧಿಸಲು ಶ್ರೀ ಮಧುಸೂದನ ಅಡಿಗ, ವಕೀಲರು, ಮನೆ ನಂ. 406, ದುರ್ಗಾ ನಿಲಯ, 60 ಅಡಿ ರಸ್ತೆ, ಚೊಕ್ಕಸಂದ್ರ, ದಾಸರಹಳ್ಳಿ ಅಂಚೆ, ಬೆಂಗಳೂರು ಇವರನ್ನು Standing Counsel ಆಗಿ ನೇಮಿಸಲಾಗಿದೆ.

ಶ್ರೀ ಮಧುಸೂದನ ಅಡಿಗ, ವಕೀಲರು ಇವರಿಗೆ ಪ್ರತಿ ಸಿಟ್ಟಿಂಗ್‌ಗೆ ರೂ. 1,500/– (ಒಂದು ಸಾವಿರದ ಐನೂರು ರೂಪಾಯಿಗಳು ಮಾತ್ರ) ಗಳಂತೆ ಸಿಟ್ಟಿಂಗ್ ಫೀಸನ್ನು ನಿಗದಿಪಡಿಸಲಾಗಿದೆ. ಶ್ರೀ ಮಧುಸೂದನ ಅಡಿಗ, ವಕೀಲರು ಇವರ ನೇಮಕಾತಿಯ ಅವಧಿಯು ದಿನಾಂಕ: 31.12.2010 ರ ಅವಧಿಯವರೆಗೆ ಅಥವಾ ಮುಂದಿನ ಆದೇಶದವರೆಗೆ, ಇದರಲ್ಲಿ ಯಾವುದು ಮೊದಲು ಅಲ್ಲಿಯವರೆಗೆ ಮಾತ್ರ ಇದ್ದು, ಇದು ಒಂದು ತಾತ್ಕಾಲಿಕ ನೇಮಕಾತಿಯಾಗಿರುತ್ತದೆ. ಸಿಟ್ಟಿಂಗ್ ಫೀಸನ್ನು ಹೊರತುಪಡಿಸಿ ಬೇರಾವುದೇ ಸೌಲಭ್ಯಕ್ಕೆ ಶ್ರೀಯುತರು ಅರ್ಹರಾಗಿರುವುದಿಲ್ಲ.

ಈ ಬಗ್ಗೆ ತಗಲುವ ವೆಚ್ಚವನ್ನು ವಿಚಾರಣಾಧಿಕಾರಿಯವರ ಕಾರ್ಯಾಲಯಕ್ಕೆ ಸರ್ಕಾರವು ಬಿಡುಗಡೆ ಮಾಡುವ ಹಣದಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1745

**ಎಸ್.ಜಿ. ಸಂಪತ್ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಶಿವ ಮಾಜಿ ಪಿ.ಸಿ., ಜಿಲ್ಲಾ ಸಶಸ್ತ್ರ ಪಡೆ, ಬಳ್ಳಾರಿ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು ಬಳ್ಳಾರಿ, ಇವರ ಆದೇಶ ಸಂಖ್ಯೆ: 2/ಇವಿ/2006 ಜಿ.ಅ.ಸಂ:484/2006–07 ದಿ: 29–01–2007.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ: 04/ಅಪೀಲು/ಸಿಬ್ಬಂದಿ–2/2007–08 ಓ.ಬಿ.102/2007–08 ದಿನಾಂಕ: 21–7–2007
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 26–11–09
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)65/2009–10 ದಿನಾಂಕ: 23–4–2010.

**ಪ್ರಸ್ತಾವನೆ :**

ಶ್ರೀ ಶಿವ ಇವರು ಜಿಲ್ಲಾ ಸಶಸ್ತ್ರ ಪಡೆ, ಬಳ್ಳಾರಿಯಲ್ಲಿ ಎ.ಪಿ.ಸಿ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ :**

1) "ಎ.ಪಿ.ಸಿ.–245, ಶಿವ ಡಿ.ಎ.ಆರ್., ಬಳ್ಳಾರಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ದಿನಾಂಕ: 02–8–2005 ರಂದು ಜಿಲ್ಲಾ ಖಜಾನೆ ಗಾರ್ಡ್ ಕರ್ತವ್ಯದಿಂದ ಮೇಲಾಧಿಕಾರಿಗಳಿಗೆ ಯಾವುದೇ ಮಾಹಿತಿ ನೀಡದೇ ಅನಧಿಕೃತವಾಗಿ ಕರ್ತವ್ಯಕ್ಕೆ ಗೈರು ಹಾಜರಾಗಿರುತ್ತೀರಿ. ಈ ಕುರಿತು ನಿಮಗೆ ದಿನಾಂಕ: 30–8–2005 ರಂದು ಸೇವಾ ಪರಿತ್ಯಜನ ನೋಟಿಸ್ ಹೊರಡಿಸಿದ್ದು, ಅದನ್ನು ದಿನಾಂಖ: 06–9–2005 ರಂದು ಸ್ವೀಕರಿಸಿ ದಿನಾಂಕ: 08–9–2005 ರಂದು ಕರ್ತವ್ಯಕ್ಕೆ ಮರಳಿ ಬಂದಿರುತ್ತೀರಿ.

2) ಪುನ: ದಿನಾಂಕ: 22–9–2005 ರಂದು ಎ.ಜೊ. ಗಾರ್ಡ್ ಕರ್ತವ್ಯದಿಂದ ಅನಧಿಕೃತವಾಗಿ ಗೈರುಹಾಜರಾಗಿದ್ದು, ಈ ಕಛೇರಿಯಿಂದ ಹೊರಡಿಸಲಾದ ಸೇವಾ ಪರಿತ್ಯಜನ ನೋಟಿಸ್ ದಿ: 24–10–2005ನ್ನು ದಿನಾಂಕ: 27–10–05 ರಂದು ಸ್ವೀಕರಿಸಿ, ದಿನಾಂಕ: 11–11–2005 ರಂದು ಕರ್ತವ್ಯಕ್ಕೆ ಬಂದು ವರದಿ ಮಾಡಿಕೊಂಡಿರುತ್ತೀರಿ.

3) ಪುನ: ದಿನಾಂಕ: 05–12–2005 ರಿಂದ ಎ.ಜಿ. ಗಾರ್ಡ್ ಕರ್ತವ್ಯದಿಂದ ಮೇಲಾಧಿಕಾರಿಗಳಿಗೆ ಯಾವ ಮಾಹಿತಿಯನ್ನು ನೀಡದೇ ಅನಧಿಕೃತವಾಗಿ ಗೈರು ಹಾಜರಾಗಿದ್ದು, ಈವರೆಗೆ ಕರ್ತವ್ಯಕ್ಕೆ ಮರಳಿ ಬಂದಿರುವುದಿಲ್ಲ. ಈ ಕುರಿತು ಈ ಕಛೇರಿಯಿಂದ ಸೇವಾ ಪರಿತ್ಯಜನ ನೋಟೀಸ್ ದಿ: 17–01–2006ನ್ನು ಹೊರಡಿಸಲಾಗಿದೆ.

ನೀವು ಒಬ್ಬ ಜವಾಬ್ದಾರಿಯುತ ಪೇದೆಯಾಗಿದ್ದು, ಶಿಸ್ತಿನ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗುವ ಅಭ್ಯಾಸವುಳ್ಳವರಾಗಿದ್ದು, ಅತೀವ ಕರ್ತವ್ಯ ನಿರ್ಲಕ್ಷ್ಯತೆ ಮತ್ತು ದುರ್ನಡತೆ, ಬೇಜವಾಬ್ದಾರಿತನ ತೋರಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬಳ್ಳಾರಿ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 29–01–2007ರ ಆದೇಶದಲ್ಲಿ ಅರ್ಜಿದಾರರನ್ನು ಕಡ್ಡಾಯ ನಿವೃತ್ತಿಗೊಳಿಸಿದ್ದಾರೆ. ಅನಧಿಕೃತವಾಗಿ ಗೈರುಹಾಜರಾದ ಅವಧಿ ದಿನಾಂಕ: 02–8–2005 ರಿಂದ 07–9–2005, ದಿನಾಂಕ: 22–9–2005 ರಿಂದ 11–11–2005 ರವರೆಗೆ ಹಾಗೂ ದಿನಾಂಕ: 05–12–2005 ರಿಂದ 07–4–2006ರ ವರೆಗಿನ ಅವಧಿಯನ್ನು ಕೆ.ಸಿ.ಎಸ್.ಆರ್. ನಿಯಮಾವಳಿಯ ನಿಯಮ 106(ಎ)ರ ಪ್ರಕಾರ ಸಂಬಳರಹಿತ ರಜೆಯೆಂದು ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 21–07–07ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇವರ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಅತೀವ ನಿರ್ಲಕ್ಷ್ಯತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 208 ಪೊಸಿಅ 2009, ಬೆಂಗಳೂರು, ದಿನಾಂಕ 01–7–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಶಿವ, ಮಾಜಿ ಪಿ.ಸಿ. ಡಿ.ಎ.ಆರ್., ಬಳ್ಳಾರಿ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1747

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## WATER RESOURCES SECRETARIAT

**Subject:** According Administrative Approval to the Minor Irrigation Projects under Accelerated Irrigation Benefit Programme - Regarding.

**Read :** Letter No. CE/MI (N) Zone/BJP/AE-5/2010-11/3297, dt. 05-06-2010 from the Chief Engineer, Minor Irrigation North Zone, Bijapur.

**PREAMBLE:**

As per the modified guidelines issued by the Government of India, Minor Irrigation schemes with potential more than 50 hectares which serve tribal areas and drought prone areas in the non-special category States are eligible for inclusion under Accelerated Irrigation Benefit Programme (AIBP) effective from December 2006. Karnataka State is classified as one of the non-special category States. 81 taluks in the State are approved under Drought prone Area Programme (DPAP). Hence Minor Irrigation schemes with potential more than 50 hectares in these 81 taluks are eligible for inclusion under Accelerated Irrigation Benefit Programme (AIBP). Central Assistance will be in the form of central grant that will be 90% of the project cost. The balance cost of the project will have to be borne by the State as State's share.

Government of Karnataka has identified the new Minor Irrigation Schemes in these taluks to seek approval of Government of India under AIBP. Finance Department, Government of Karnataka has also approved the proposal of the Water Resources Department (Minor Irrigation) for according approval to such schemes. The Chief Engineer, Minor Irrigation North Zone, Bijapur in the letter read above has requested for according administrative approval to the estimates of the works proposed under AIBP. Accordingly the following scheme in DPAP taluk is being considered for according administrative approval.

**Head of Account : 4702-00-101-1-10-139 AIBP Major Works**

**Rs. in lakhs**

| Sl. No. | Name of the Scheme | District | Taluka | Estimated cost | Potential planned (in Ha.) | Cost/Ha (Rs. In lakhs) |
|---|---|---|---|---|---|---|
| **1** | **2** | **3** | **4** | **5** | **6** | **7** |
| 1 | Construction of Bridge cum Barrage across Mullamari river near Sonth Bhunyar village | Gulbarga | Gulbarga | 200.00 | 130.00 | 1.54 |
| | | | **Total** | **200.00** | | |

**Government Order No. SANEEYEE 236, MASAVI 2009 (2), Bangalore, dated : 06-07-2010**

In view of the above, Administrative approval is hereby accorded for taking up the above work with an estimated cost of Rs. 200 lakhs (Rupees Two hundred lakhs only) subject to the following conditions.

1. Implementation of these projects should be taken up only after receipt of necessary approval from the GOI.
2. The projects are to be completed with in a period of 2 years after receipt of approval of Government of India to these schemes.
3. The funding of the scheme is in the ratio of 90:10 between the Central Govt. and State Govt.
4. The Central share is in the form of grant to the State.
5. The projects will be implemented by the Water Resources Department (Minor Irrigation) as per the KTPP act.
6. The implementation of the project shall adhere to the terms and conditions of the guidelines issued by the GOI.
7. The implementation of the project shall be as per the required technical specifications and financial specifications as per the approved DPRs.
8. Water users association shall be formed for post construction maintenance and the scheme shall be handed over to the same after its construction for the O&M.

This order is issued with the concurrence of Finance Department in note No. PWD-890-FC-1/2009 dated 09-12-2009.

By Order and in the name of the Governor of Karnataka

**Rudramurthy**

Ex-officio Under Secretary to Government,

Water Resources Department (Minor Irrigation).

P.R. 1795

## WATER RESOURCES SECRETARIAT

**Subject:** According Administrative Approval to the Minor Irrigation Projects under Accelerated Irrigation Benefit Programme - Regarding.

**Read :** Letter No. CE/MI (N) Zone/BJP/AE-5/2010-11/3297, dt. 05-06-2010 from the Chief Engineer, Minor Irrigation North Zone, Bijapur.

**PREAMBLE:**

As per the modified guidelines issued by the Government of India, Minor Irrigation schemes with potential more than 50 hectares which serve tribal areas and drought prone areas in the non-special category States are eligible for inclusion under Accelerated Irrigation Benefit Programme (AIBP) effective from December 2006. Karnataka State is classified as one of the non-special category States. 81 taluks in the State are approved under Drought prone Area Programme (DPAP). Hence Minor Irrigation schemes with potential more than 50 hectares in these 81 taluks are eligible for inclusion under Accelerated Irrigation Benefit Programme (AIBP). Central Assistance will be in the form of central grant that will be 90% of the project cost. The balance cost of the project will have to be borne by the State as State's share.

Government of Karnataka has identified the new Minor Irrigation Schemes in these taluks to seek approval of Government of India under AIBP. Finance Department, Government of Karnataka has also approved the proposal of the Water Resources Department (Minor Irrigation) for according approval to such schemes. The Chief Engineer, Minor Irrigation North Zone, Bijapur in the letter read above has requested for according administrative approval to the estimates of the works proposed under AIBP. Accordingly the following schemes in DPAP taluks are being considered for according administrative approval.

**Head of Account : 4702-00-101-1-10-139 AIBP Major Works**

**Rs. in lakhs**

| Sl. No. | Name of Scheme | District | Taluka | Estimated cost | Potential planned (in Ha.) | Cost/Ha (Rs. In lakhs) |
|---|---|---|---|---|---|---|
| **1** | **2** | **3** | **4** | **5** | **6** | **7** |
| 1 | Construction of Bridge cum Barrage across Mullamari river near Kinni Surfose village | Gulbarga | Gulbarga | 300.00 | 210.00 | 1.42 |
| 2 | Construction of Bridge cum Barrage across nala near Chincholi (H) | Gulbarga | Chittapur | 150.00 | 100.00 | 1.50 |
| **Total** | | | | **450.00** | | |

**Government Order No. SANEEYEE 236, MASAVI 2009 (3), Bangalore, dated : 06-07-2010**

In view of the above, Administrative approval is hereby accorded for taking up the above 2 works with an estimated cost totaling to Rs. 450 lakhs (Rupees Four hundred and fifty lakhs only) subject to the following conditions.

1. Implementation of these projects shoul be taken up only after receipt of necessary approval from the GOI.
2. The projects are to be completed with in a period of 2 years after receipt of approval of Government of India to these schemes.
3. The funding of the scheme is in the ratio of 90:10 between the Central Govt. and State Govt.
4. The Central share is in the form of grant to the State.
5. The projects will be implemented by the Water Resources Department (Minor Irrigation) as per the KTPP act.
6. The implementation of the project shall adhere to the terms and conditions of the guidelines issued by the GOI.
7. The implementation of the project shall be as per the required technical specifications and financial specifications as per the approved DPRs.
8. Water users association shall be formed for post construction maintenance and the scheme shall be handed over to the same after its construction for the O&M.

This order is issued with the concurrence of Finance Department in note No. PWD-890-FC-1/2009 dated 09-12-2009.

By Order and in the name of the Governor of Karnataka

**Rudramurthy**

P.R. 1796

Ex-officio Under Secretary to Government,

Water Resources Department (Minor Irrigation).

## WATER RESOURCES SECRETARIAT

**Subject:** According Administrative Approval to the Minor Irrigation Projects under Accelerated Irrigation Benefit Programme - Regarding.

**Read :** Letter No. CE/MI (N) Zone/BJP/AE-6/2010-11/3595, dt. 23-06-2010 from the Chief Engineer, Minor Irrigation North Zone, Bijapur.

**PREAMBLE:**

As per the modified guidelines issued by the Government of India, Minor Irrigation schemes with potential more than 50 hectares which serve tribal areas and drought prone areas in the non-special category States are eligible for inclusion under Accelerated Irrigation Benefit Programme (AIBP) effective from December 2006. Karnataka State is classified as one of the non-special category States. 81 taluks in the State are approved under Drought prone Area Programme (DPAP). Hence Minor Irrigation schemes with potential more than 50 hectares in these 81 taluks are eligible for inclusion under Accelerated Irrigation Benefit Programme (AIBP). Central Assistance will be in the form of central grant that will be 90% of the project cost. The balance cost of the project will have to be borne by the State as State's share.

Government of Karnataka has identified the new Minor Irrigation Schemes in these taluks to seek approval of Government of India under AIBP. Finance Department, Government of Karnataka has also approved the proposal of the Water Resources Department (Minor Irrigation) for according approval to such schemes. The Chief Engineer, Minor Irrigation North Zone, Bijapur in the letter read above has requested for according administrative approval to the estimates of the works proposed under AIBP. Accordingly the following scheme in DPAP taluk is being considered for according administrative approval.

**Head of Account : 4702-00-101-1-10-139 AIBP Major Works**

**Rs. in lakhs**

| Sl. No. | Name of Scheme | District | Taluka | Estimated cost | Potential planned (in Ha.) | Cost/Ha (Rs. In lakhs) |
|---|---|---|---|---|---|---|
| **1** | **2** | **3** | **4** | **5** | **6** | **7** |
| 1 | Construction of Barrage near Kappargaon village | Bidar | Humnabad | 50.00 | 60 | 0.84 |
| 2 | Construction of Barrage near Shamatabad village | Bidar | Humnabad | 50.00 | 52 | 0.96 |
| 3 | Construction of Bridge cum Barrage near Diggi village | Bidar | Aurad | 180.00 | 118 | 1.52 |
| 4 | Construction of Bridge cum Barrage near Gadikushanoor village | Bidar | Aurad | 200.00 | 121 | 1.65 |
| | | | **Total** | **480.00** | | |

**Government Order No. SANEEYEE 236, MASAVI 2009 (4), Bangalore, dated : 06-07-2010**

In view of the above, Administrative approval is hereby accorded for taking up the above works with an estimated cost totalling to Rs. 480.00 lakhs (Rupees Four hundred and eighty lakhs only) subject to the following conditions.

1. Implementation of these projects shoul be taken up only after receipt of necessary approval from the GOI.
2. The projects are to be completed with in a period of 2 years after receipt of approval of Government of India to these schemes.
3. The funding of the scheme is in the ratio of 90:10 between the Central Govt. and State Govt.
4. The Central share is in the form of grant to the State.
5. The projects will be implemented by the Water Resources Department (Minor Irrigation) as per the KTPP act.
6. The implementation of the project shall adhere to the terms and conditions of the guidelines issued by the GOI.
7. The implementation of the project shall be as per the required technical specifications and financial specifications as per the approved DPRs.
8. Water users association shall be formed for post construction maintenance and the scheme shall be handed over to the same after its construction for the O&M.

This order is issued with the concurrence of Finance Department in note No. PWD-890-FC-1/2009 dated 09-12-2009.

By Order and in the name of the Governor of Karnataka

**Rudramurthy**

Ex-officio Under Secretary to Government,

Water Resources Department (Minor Irrigation).

P.R. 1797

## WATER RESOURCES SECRETARIAT

**Subject:** According Administrative Approval to the Minor Irrigation Projects under Accelerated Irrigation Benefit Programme - Regarding.

**Read :**
1. Letter No. CE/MI (N) Zone/BJP/AE-6/2010-11/3595, dt. 23-06-2010 from the Chief Engineer, Minor Irrigation North Zone, Bijapur.
2. Letter No. CE/MI (N) Zone/BJP/AE-6/2010-11/3596, dt. 23-06-2010 from the Chief Engineer, Minor Irrigation North Zone, Bijapur.

**PREAMBLE:**

As per the modified guidelines issued by the Government of India, Minor Irrigation schemes with potential more than 50 hectares which serve tribal areas and drought prone areas in the non-special category States are eligible for inclusion under Accelerated Irrigation Benefit Programme (AIBP) effective from December 2006. Karnataka State is classified as one of the non-special category States. 81 taluks in the State are approved under Drought prone Area Programme (DPAP). Hence Minor Irrigation schemes with potential more than 50 hectares in these 81 taluks are eligible for inclusion under Accelerated Irrigation Benefit Programme (AIBP). Central Assistance will be in the form of central grant that will be 90% of the project cost. The balance cost of the project will have to be borne by the State as state's share.

Government of Karnataka has identified the new Minor Irrigation Schemes in these taluks to seek approval of Government of India under AIBP. Finance Department, Government of Karnataka has also approved the proposal of the Water Resources Department (Minor Irrigation) for according approval to such schemes. The Chief Engineer, Minor Irrigation North Zone, Bijapur in the letter read above has requested for according administrative approval to the estimates of the works proposed under AIBP. Accordingly the following scheme in DPAP taluk is being considered for according administrative approval.

**Head of Account : 4702-00-101-1-10-139 AIBP Major Works**

**Rs. in lakhs**

| Sl. No. | Name of Scheme | District | Taluka | Estimated cost | Potential planned (in Ha.) | Cost/Ha (Rs. In lakhs) |
|---|---|---|---|---|---|---|
| **1** | **2** | **3** | **4** | **5** | **6** | **7** |
| 1 | Construction of Bridge cum Barrage near Kherda (K) village | Bidar | Basavakalyan | 210.00 | 108 | 1.94 |
| 2 | Construction of Barrage near Othgi village | Bidar | Humnabad | 50.00 | 52 | 0.96 |
| 3 | Construction of Pickup near Kandagul village | Bidar | Humnabad | 50.00 | 52 | 0.96 |
| 4 | Construction of Barrage near Nimbur village | Bidar | Humnabad | 135.00 | 120 | 0.89 |
| **Total** | | | | **445.00** | | |

**Government Order No. SANEEYEE 236, MASAVI 2009 (5), Bangalore, dated : 06-07-2010**

In view of the above, Administrative approval is hereby accorded for taking up the above works with an estimated cost of to Rs. 200 lakhs (Rupees Two hundred lakhs only) subject to the following conditions.

1. Implementation of these projects shoul be taken up only after receipt of necessary approval from the GOI.
2. The projects are to be completed with in a period of 2 years after receipt of approval of Government of India to these schemes.
3. The funding of the scheme is in the ratio of 90:10 between the Central Govt. and State Govt.
4. The Central share is in the form of grant to the State.
5. The projects will be implemented by the Water Resources Department (Minor Irrigation) as per the KTPP act.
6. The implementation of the project shall adhere to the terms and conditions of the guidelines issued by the GOI.
7. The implementation of the project shall be as per the required technical specifications and financial specifications as per the approved DPRs.
8. Water users association shall be formed for post construction maintenance and the scheme shall be handed over to the same after its construction for the O&M.

This order is issued with the concurrence of Finance Department in note No. PWD-890-FC-1/2009 dated 09-12-2009.

By Order and in the name of the Governor of Karnataka

**Rudramurthy**

Ex-officio Under Secretary to Government,

Water Resources Department (Minor Irrigation).

P.R. 1798

## WATER RESOURCES SECRETARIAT

**Subject:** According Administrative Approval to the Minor Irrigation Projects under Accelerated Irrigation Benefit Programme - Regarding.

**Read :** Letter No. CE/MI (N) Zone/BJP/PB-3/2010-11/3875, dt. 07-07-2010 from the Chief Engineer, Minor Irrigation North Zone, Bijapur.

**PREAMBLE:**

As per the modified guidelines issued by the Government of India, Minor Irrigation schemes with potential more than 50 hectares which serve tribal areas and drought prone areas in the non-special category States are eligible for inclusion under Accelerated Irrigation Benefit Programme (AIBP) effective from December 2006. Karnataka State is classified as one of the non-special category States. 81 taluks in the State are approved under Drought prone Area Programme (DPAP). Hence Minor Irrigation schemes with potential more than 50 hectares in these 81 taluks are eligible for inclusion under Accelerated Irrigation Benefit

Programme (AIBP). Central Assistance will be in the form of central grant that will be 90% of the project cost. The balance cost of the project will have to be borne by the State as state's share.

Government of Karnataka has identified the new Minor Irrigation Schemes in these taluks to seek approval of Government of India under AIBP. Finance Department, Government of Karnataka has also approved the proposal of the Water Resources Department (Minor Irrigation) for according approval to such schemes. The Chief Engineer, Minor Irrigation North Zone, Bijapur in the letter read above has requested for according administrative approval to the estimates of the works proposed under AIBP. Accordingly the following scheme in DPAP taluk is being considered for according administrative approval.

**Head of Account : 4702-00-101-1-10-139 AIBP Major Works**

**Rs. in lakhs**

| Sl. No. | Name of Project | District | Taluk | Estimated cost | Potential planned (in Ha.) | Cost/Ha (Rs. In lakhs) |
|---|---|---|---|---|---|---|
| **1** | **2** | **3** | **4** | **5** | **6** | **7** |
| 1 | Constn. of M.I. Tank near Pakal village (Site-2) | Gulbarga | Sedam | 400.00 | 275 | 1.45 |
| 2 | Constn. of B.C.B. near Muchalam village | Bidar | B,Kalyan | 95.00 | 50 | 1.9 |
| | | | **Total** | **495.00** | | |

**Government Order No. SANEEYEE 236, MASAVI 2009 (18), Bangalore, dated : 09-07-2010**

In view of the above, Administrative approval is hereby accorded for taking up the above works with an estimated cost totaling to Rs. 495.00 lakhs (Rupees Four hundred and ninty five lakhs only) subject to the following conditions.

1. Implementation of these projects should be taken up only after receipt of necessary approval from the GOI.
2. The projects are to be completed with in a period of 2 years after receipt of approval of Government of India to these schemes.
3. The funding of the scheme is in the ratio of 90:10 between the Central Govt. and State Govt.
4. The Central share is in the form of grant to the State.
5. The projects will be implemented by the Water Resources Department (Minor Irrigation) as per the KTPP act.
6. The implementation of the project shall adhere to the terms and conditions of the guidelines issued by the GOI.
7. The implementation of the project shall be as per the required technical specifications and financial specifications as per the approved DPRs.
8. Water users association shall be formed for post construction maintenance and the scheme shall be handed over to the same after its construction for the O&M.

This order is issued with the concurrence of Finance Department in note No. PWD-890-FC-1/2009 dated 09-12-2009.

By Order and in the name of the Governor of Karnataka

**Rudramurthy**

Ex-officio Under Secretary to Government,
Water Resources Department (Minor Irrigation).

P.R. 1799

## ಶಿಕ್ಷಣ ಸಚಿವಾಲಯ

**ವಿಷಯ :** 2009–10ನೇ ಸಾಲಿನ ಸೇವಾ ನಿರತ ಹಿಂದಿ ಶಿಕ್ಷಕರನ್ನು ಸರ್ಕಾರಿ ಹಿಂದಿ ಶಿಕ್ಷಕರ ಪ್ರಶಿಕ್ಷಣ ಮಹಾವಿದ್ಯಾಲಯ, ಮೈಸೂರು ಇಲ್ಲಿಗೆ ನಿಯೋಜಿಸುವ ಸಂಬಂಧ ಮೀಸಲಾತಿ ಪಾಲನೆ ಕುರಿತು

**ಓದಲಾಗಿದೆ :** ಪ್ರಕರಣ ಸಂಖ್ಯೆ: 52/2009ರಲ್ಲಿ ಕರ್ನಾಟಕ ರಾಜ್ಯ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಬುಡಕಟ್ಟುಗಳ ದಿನಾಂಕ 28–01–2010ರ ಆದೇಶ.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 28–01–2010ರ ಆದೇಶದಲ್ಲಿ, ಕರ್ನಾಟಕ ರಾಜ್ಯ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಬುಡಕಟ್ಟುಗಳ ಆಯೋಗ, ಶ್ರೀಮತಿ ನಂದಾಬಾಬು ಹೊಸಮನಿ ಕೋಂ. ರಮೇಶ್ ತಳವಾರ, ಆದಿತ್ಯನಗರ, ಗೋಕಾಕ್, ಇವರು ಸಲ್ಲಿಸಿದ ಹಿಂದಿ ಶಿಕ್ಷಣ ಪಾರಂಗತ ತರಬೇತಿ ನಿಯೋಜನೆ ಬಗ್ಗೆ ಪರಿಶೀಲಿಸಿದೆ. ಸರ್ಕಾರಿ ಹಿಂದಿ ಶಿಕ್ಷಕ ಪ್ರಶಿಕ್ಷಣ ಮಹಾವಿದ್ಯಾಲಯ, ಮೈಸೂರು, ಇವರ ಪ್ರಕಟಣೆಯ ಮೇರೆಗೆ ಸದರಿಯವರು 2009–10ನೇ ಸಾಲಿನಲ್ಲಿ ಪ್ರವೇಶಾತಿ ಕುರಿತು, ಪ್ರವೇಶ ಪರೀಕ್ಷೆಯಲ್ಲಿ ಹಾಜರಾಗಿ ಉತ್ತೀರ್ಣರಾಗಿ, ಮೆರಿಟ್ ಪಟ್ಟಿಯಲ್ಲಿ ಕ್ರಮ ಸಂಖ್ಯೆ: 85 ಹೊಂದಿದ್ದಾಗ್ಯೂ ಸೇವಾ ನಿರತ ಶಿಕ್ಷಕರಾಗಿ ಮೀಸಲಿಟ್ಟ 20 ಸೀಟುಗಳ ಹಂಚಿಕೆಯಲ್ಲಿ ಪರಿಶಿಷ್ಟ ಜಾತಿಯ ಶಿಕ್ಷಕರಿಗೆ ಮೀಸಲಾತಿ ನೀಡಿಲ್ಲ ಎಂದು

ಕರ್ನಾಟಕ ರಾಜ್ಯ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಬುಡಕಟ್ಟುಗಳ ಆಯೋಗಕ್ಕೆ ದೂರು ಸಲ್ಲಿಸಿದ ಹಿನ್ನೆಲೆಯಲ್ಲಿ ದಿನಾಂಕ 28-01-2010ರ ಆದೇಶದಲ್ಲಿ ಆಯೋಗವು ಶ್ರೀಮತಿ ನಂದಾಬಾಬು ಹೊಸಮನಿರವರಿಗೆ 2010-11ನೇ ಸಾಲಿಗೆ ತರಬೇತಿಗೆ ಆಯ್ಕೆ ಮಾಡಲು ನಿರ್ದೇಶನ ನೀಡಿರುತ್ತದೆ. ತರಬೇತಿ ನಿಯೋಜನೆ ಬಗ್ಗೆ ಮೀಸಲಾತಿ ನೀಡುವ ಬಗ್ಗೆ ಸ್ಪಷ್ಟಪಡಿಸಿ ಸೂಕ್ತ ನಿರ್ದೇಶನಗಳನ್ನು ನೀಡುವ ಬಗ್ಗೆ ಕುರಿತು ಸಹ ಆದೇಶಿಸಿದೆ. ಮುಂದುವರೆದು, ಕಳೆದ 5 ವರ್ಷಗಳಿಂದ ಇಂತಹ ನಿಯೋಜನೆಯನ್ನು ಮೀಸಲಾತಿ ಪರಿಗಣಿಸದೆ ನಿರಾಕರಿಸಲ್ಪಟ್ಟ ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗದ ಅಭ್ಯರ್ಥಿಗಳ ಸಂಖ್ಯೆಗನುಗುಣವಾಗಿ ಆ ಸಂಖ್ಯೆಯ ನಿಯೋಜನೆಗಳನ್ನು ಬ್ಯಾಕ್‌ಲಾಗ್ ಎಂದು ಪರಿಗಣಿಸಿ ಮುಂಬರುವ 2010-11ನೇ ಸಾಲಿನಲ್ಲಿ ತುಂಬುವ ಮೂಲಕ ಅನುಷ್ಠಾನಗೊಳಿಸಲು ಆಯೋಗವು ಆದೇಶಿಸಿರುತ್ತದೆ.

ಆಯೋಗದ ಮೇಲ್ಕಂಡ ಆದೇಶಗಳನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 23 ಪಿಟಿಐ 2010, ಬೆಂಗಳೂರು, ದಿನಾಂಕ 3-07-2010**

ಯಾವುದೇ ಸೇವಾನಿರತ ಶಿಕ್ಷಕರನ್ನು ಉನ್ನತ ವ್ಯಾಸಂಗಕ್ಕೆ ನಿಯೋಜಿಸುವಲ್ಲಿ ಮೀಸಲಾತಿ ಅನುಸರಿಸುವ ಕುರಿತು ಕರ್ನಾಟಕ ನಾಗರೀಕ ಸೇವಾ ನಿಯಮಗಳ ಅನುಬಂಧ-2ಎರಲ್ಲಿ ಮೀಸಲಾತಿ ಪಾಲನೆ ಕುರಿತು ಸ್ಪಷ್ಟನೆ ಇರುವುದಿಲ್ಲ. ಯಾವುದೇ ತರಬೇತಿಗೆ ಮೀಸಲಾತಿ ಅನ್ವಯ ಮಾಡುವಲ್ಲಿ ನಿಗದಿತ ರೋಸ್ಟರ್‌ನ್ನು ಅಳವಡಿಸಿಲ್ಲ. ಆದ್ದರಿಂದ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದವರ ಅಭ್ಯರ್ಥಿಗಳನ್ನು ಉನ್ನತ ವ್ಯಾಸಂಗಕ್ಕೆ ನಿಯೋಜನೆ ಬಯಸಿದಲ್ಲಿ ಅವರ ಅರ್ಹತೆ, ಸೇವಾಹಿರಿತನ ಮತ್ತು ಇನ್ನುಳಿದಂತೆ ಅವರ ಸೇವಾವಧಿ ಮತ್ತು ಇತರೆ ಇನ್ನಿತರ ಅಂಶಗಳನ್ನು ಪರಿಗಣಿಸಿ 2010-11ನೇ ಸಾಲಿನಿಂದ ಜಾರಿಗೆ ಬರುವಂತೆ ಇಂತಹ ಉನ್ನತ ವ್ಯಾಸಂಗಕ್ಕೆ ಸಂಬಂಧಿಸಿದ ನಿಯೋಜನೆಗೆ ನಿಯಮಾನುಸಾರ ಸೂಕ್ತ ಮೀಸಲಾತಿಗೆ ಅವಕಾಶ ಕಲ್ಪಿಸಿ ಆದೇಶ ಹೊರಡಿಸಲಾಗಿದೆ.

ಮಾನ್ಯ **ಕರ್ನಾಟಕ ರಾಜ್ಯ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಬುಡಕಟ್ಟುಗಳ** ಆಯೋಗದವರಿಂದ ಮೊದಲ ಬಾರಿಗೆ ನಿಯೋಜನೆಗೆ ಸಂಬಂಧಿಸಿದಂತೆ, ಮೀಸಲಾತಿಗೆ ಸೂಚಿಸಲ್ಪಟ್ಟಿರುವ ಕಾರಣ, ಬ್ಯಾಕ್‌ಲಾಗ್‌ನ್ನು ಈ ಹಂತದಲ್ಲಿ ತುಂಬಲು ಪರಿಗಣಿಸಲಾಗಿರುವುದಿಲ್ಲ ಎಂದು ಆದೇಶಿಸಲಾಗಿದೆ.

ಈ ಆದೇಶವನ್ನು ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯ ದಿನಾಂಕ 07-06-2010ರನ್ವಯ ನೀಡಿರುವ ಅಭಿಪ್ರಾಯದ ಹಿನ್ನೆಲೆಯಲ್ಲಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1800

**ಎಂ.ಎನ್. ಸೋಮಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿಗಳು,

ಶಿಕ್ಷಣ ಇಲಾಖೆ

## ತೋಟಗಾರಿಕೆ ಸಚಿವಾಲಯ

**ವಿಷಯ :** ಬಾಗಲಕೋಟೆ ತೋಟಗಾರಿಕೆ ವಿಶ್ವವಿದ್ಯಾನಿಲಯದ ಅಧೀನದಲ್ಲಿ 2010-11ನೇ ಸಾಲಿನಲ್ಲಿ ಪ್ರಾರಂಭಿಸಲಾಗಿರುವ 4 ಹೊಸ ತೋಟಗಾರಿಕೆ ಕಾಲೇಜುಗಳಿಗೆ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :** ಕುಲಪತಿಗಳು, ಬಾಗಲಕೋಟೆ ತೋಟಗಾರಿಕೆ ವಿಶ್ವವಿದ್ಯಾನಿಲಯರವರ ಪತ್ರ ಸಂಖ್ಯೆ: ಕುಪ/ಹು.ಸೃ.ಔ/2800/2010-11 ದಿ. 10-05-2010.

**ಪ್ರಸ್ತಾವನೆ :**

ಮೇಲೆ ಓದಲಾದ ಪ್ರಸ್ತಾವನೆಯಲ್ಲಿ ತೋಟಗಾರಿಕೆ ವಿಶ್ವವಿದ್ಯಾಲಯ ಮತ್ತು ಅಧೀನದಲ್ಲಿ ಬರುವ 9 ತೋಟಗಾರಿಕೆ ಕಾಲೇಜುಗಳು ಹಾಗೂ 12 ತೋಟಗಾರಿಕೆ ಸಂಶೋಧನಾ ಕೇಂದ್ರಗಳಿಗೆ 2010-11ನೇ ಸಾಲಿನಲ್ಲಿ ವಿವಿಧ ವೃಂದದ 844 ಬೋಧಕ/ಬೋಧಕೇತರ ಹುದ್ದೆಗಳನ್ನು ಸೃಜಿಸಿ ಭರ್ತಿ ಮಾಡಲು ಅನುಮತಿ ನೀಡುವಂತೆ ಕುಲಪತಿಗಳು, ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬಾಗಲಕೋಟೆರವರು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಈಗಾಗಲೇ ಸರ್ಕಾರದ ಆದೇಶ ಸಂಖ್ಯೆ:ಕೃತೋಇ 341 ತೋಸೇಪ 2008 ದಿನಾಂಕ: 09-07-2009, ಸರ್ಕಾರದ ಆದೇಶ ಸಂಖ್ಯೆ: ಕೃತೋಇ 231 ತೋಇವಿ 2009 ದಿನಾಂಕ: 19-08-2009, ಸರ್ಕಾರದ ಆದೇಶ ಸಂಖ್ಯೆ: ಕೃತೋಇ 231 ತೋಇವಿ 2009 ದಿನಾಂಕ: 16-09-2009 ಸರ್ಕಾರದ ಆದೇಶ ಸಂಖ್ಯೆ:ಕೃತೋಇ 150 ತೋಇವಿ 2010 ದಿ: 09-06-2010 ಹಾಗೂ ಕೃತೋಇ 205 ತೋಸೇಪ 2010 ದಿ. 05-07-2010ರಲ್ಲಿ ತೋಟಗಾರಿಕೆ ವಿಶ್ವವಿದ್ಯಾಲಯ ಮತ್ತು ಅದರ ಅಧೀನದಲ್ಲಿ ಬರುವ ತೋಟಗಾರಿಕೆ ಕಾಲೇಜು ಹಾಗೂ ಸಂಶೋಧನಾ ಕೇಂದ್ರಗಳಿಗೆ ವಿವಿಧ ವೃಂದದ ಹುದ್ದೆಗಳನ್ನು ಸೃಜಿಸಿ ಭರ್ತಿ ಮಾಡಲು ಸರ್ಕಾರದ ಅನುಮತಿ ನೀಡಲಾಗಿದೆ.

ಪ್ರಸ್ತುತ ಮೇಲೆ ಓದಲಾದ ಪ್ರಸ್ತಾವನೆಯನ್ನು ಪರಿಶೀಲಿಸಿ 2010-11ನೇ ಸಾಲಿನಲ್ಲಿ ರಾಜ್ಯದ ಮೈಸೂರು, ಕೊಪ್ಪಳ, ಶಿರಸಿ ಮತ್ತು ಹಿರಿಯೂರು ನಗರಗಳಲ್ಲಿ ಹೊಸದಾಗಿ ಪ್ರಾರಂಭಿಸಲಾಗಿರುವ 4 ಹೊಸ ತೋಟಗಾರಿಕೆ ಕಾಲೇಜುಗಳಿಗೆ ಮಾತ್ರ ಅಗತ್ಯವಾಗಿ ಬೇಕಾಗಿರುವ ಬೋಧಕ/ಬೋಧಕೇತರ ಹುದ್ದೆಗಳನ್ನು ಸೃಜಿಸಿ ಭರ್ತಿ ಮಾಡುವ ಬಗ್ಗೆ ಈ ಕೆಳಕಂಡಂತೆ ಸರ್ಕಾರದ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ತೋಇ 210 ತೋಇವಿ 2010, ಬೆಂಗಳೂರು, ದಿನಾಂಕ 9-07-2010**

ಪ್ರಸ್ತಾವನೆಯಲ್ಲಿ ತಿಳಿಸಿರುವ ವಿವರಣೆಗಳ ಹಿನ್ನೆಲೆಯಲ್ಲಿ ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾನಿಲಯ, ಬಾಗಲಕೋಟೆ ಇದರ ಅಧೀನದಲ್ಲಿ 2010-11ನೇ ಸಾಲಿನಲ್ಲಿ ರಾಜ್ಯದ ಮೈಸೂರು, ಕೊಪ್ಪಳ, ಶಿರಸಿ ಮತ್ತು ಹಿರಿಯೂರು ನಗರಗಳಲ್ಲಿ ಹೊಸದಾಗಿ ಪ್ರಾರಂಭಿಸಲಾಗಿರುವ 4 ಹೊಸ ತೋಟಗಾರಿಕೆ ಕಾಲೇಜುಗಳಿಗೆ ಈ ಕೆಳಕಂಡ ಬೋಧಕ/ಬೋಧಕೇತರ ಹುದ್ದೆಗಳನ್ನು ಸೃಜಿಸಿ ಭರ್ತಿ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| ಕ್ರ.ಸಂ. | ಹುದ್ದೆಗಳ ಪದನಾಮ | ತೋಟಗಾರಿಕೆ ಕಾಲೇಜುಗಳ ಹೆಸರು ಹಾಗೂ ಆಯಾ ಕಾಲೇಜುಗಳಿಗೆ ಮಂಜೂರಾದ ಹುದ್ದೆಗಳ ಸಂಖ್ಯೆ | | | |
|---|---|---|---|---|---|
| | | ಮೈಸೂರು | ಕೊಪ್ಪಳ | ಶಿರಸಿ | ಹಿರಿಯೂರು |
| 1. | ಡೀನ್ | 01 | 01 | 01 | 01 |
| 2. | ಅಸೋಸಿಯೇಟ್ ಪ್ರೊಫೆಸರ್ | 02 | 02 | 02 | 02 |
| 3. | ಅಸಿಸ್ಟೆಂಟ್ ಪ್ರೊಫೆಸರ್ | 12 | 12 | 12 | 12 |
| 4. | ಅಸಿಸ್ಟೆಂಟ್ ಕಂಟ್ರೋಲರ್ | 01 | 01 | 01 | 01 |

| | | | | | |
|---|---|---|---|---|---|
| 5. | ಅಸಿಸ್ಟೆಂಟ್ ರಿಜಿಸ್ಟ್ರಾರ್ | 01 | 01 | 01 | 01 |
| 6. | ಅಕೌಂಟ್ಸ್ ಸೂಪರಿಂಟೆಂಡೆಂಟ್ | 01 | 01 | 01 | 01 |
| 7. | ಅಡ್ಮಿನಿಸ್ಟ್ರೇಟಿವ್ ಅಸಿಸ್ಟೆಂಟ್ | 01 | 01 | 01 | 01 |
| 8. | ಅಸಿಸ್ಟೆಂಟ್ ಅಡ್ಮಿನಿಸ್ಟ್ರೇಟಿವ್ ಆಫೀಸರ್ | 01 | 01 | 01 | 01 |

ಮೇಲ್ಕಂಡ ಹುದ್ದೆಗಳಲ್ಲದೆ ಹೊಸದಾಗಿ ಪ್ರಾರಂಭವಾಗಿರುವ 4 ತೋಟಗಾರಿಕೆ ಕಾಲೇಜುಗಳಲ್ಲಿ ಬೋಧನಾ ಕಾರ್ಯದ ಅಗತ್ಯವನ್ನಾಧರಿಸಿ ಹೆಚ್ಚುವರಿಯಾಗಿ ಪ್ರತಿ ಕಾಲೇಜಿನಲ್ಲಿ 5 ಬೋಧಕ ಸಿಬ್ಬಂದಿಯನ್ನು ಮೀರದಂತೆ ಹೊರಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳಲು ಸಹ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: 254 ವೆಚ್ಚ-4/2010 ದಿನಾಂಕ: 06-07-2010ರ ಸಹಮತಿ ಅನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1801

**ಎಸ್. ರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ,
ತೋಟಗಾರಿಕೆ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 32ರಲ್ಲಿ ಮುಖ್ಯ ಇಂಜಿನಿಯರ್ ಆಗಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳಿಗೆ ಕಾರ್ಯ ನಿರ್ವಹಣಾ ವರದಿಯನ್ನು ಬರೆಯುವ ಅಧಿಕಾರವನ್ನು ಪ್ರತ್ಯಾಯೋಜಿಸುವ ಕುರಿತು.

**ಓದಲಾಗಿದೆ** : 1) ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ಕಡತ ಸಂಖ್ಯೆ ಲೋಇ 01 ಡಿಎಸ್ ಎಸ್ 2010-07-01

* * *

**ಪ್ರಸ್ತಾವನೆ :**

ಮೇಲೆ ಓದಲಾದ (1) ರಲ್ಲಿ ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಮುಖ್ಯ ಇಂಜಿನಿಯರ್‌ಗಳನ್ನು ಇಲಾಖಾ ಮುಖ್ಯಸ್ಥರೆಂದು ನಾಮಾಂಕಿತಗೊಳಿಸಿದ್ದು, ಆ ಇಲಾಖೆಗೆ ಒಳಪಟ್ಟು ಮೂರು ಮುಖ್ಯ ಇಂಜಿನಿಯರ್ ಹುದ್ದೆಗಳಾದ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು ಮುಖ್ಯ ಇಂಜಿನಿಯರ್ ರಾಷ್ಟ್ರೀಯ ಹೆದ್ದಾರಿಗಳು, ಬೆಂಗಳೂರು ಮತ್ತು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ) ಈ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಮುಖ್ಯ ಇಂಜಿನಿಯರ್‌ಗಳ ಕಾರ್ಯ ನಿರ್ವಹಣಾ ವರದಿ ಕುರಿತಂತೆ ಸರ್ಕಾರದ ಅಧಿಕೃತ ಜ್ಞಾಪನಾ ಸಂಖ್ಯೆ ಸಿಆಸುಇ 4 ಸೆರವ 2002, ದಿನಾಂಕ : 29-08-2002ರಲ್ಲಿ ಕರ್ನಾಟಕ ಸಿವಿಲ್ ಸೇವೆಗಳು (ಕಾರ್ಯನಿರ್ವಹಣಾ ವರದಿಗಳು) ನಿಯಮಗಳು 2000ರ ಮಾನದಂಡಗಳಂತೆ ವರದಿ ಪ್ರಾಧಿಕಾರ, ಪುನರ್ ಪರಿಶೀಲನಾ ಪ್ರಾಧಿಕಾರ ಹಾಗೂ ಅಂಗೀಕಾರ ಪ್ರಾಧಿಕಾರವನ್ನು ಸಂದರ್ಭಾನುಸಾರ ನಿಗದಿಪಡಿಸುವ ಬಗ್ಗೆ ಸೂಚನೆಗಳಿದ್ದು, ಲೋಕೋಪಯೋಗಿ ಇಲಾಖೆಯ ಕಾರ್ಯದರ್ಶಿಯವರು ಮತ್ತು ಮೇಲ್ಕಂಡ ಮೂವರು ಇಂಜಿನಿಯರ್‌ಗಳು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 32ರಡಿಯಲ್ಲಿ ನಿರ್ವಹಿಸುತ್ತಿರುವ ಮೇಲ್ಕಂಡ ಮೂವರು ಮುಖ್ಯ ಇಂಜಿನಿಯರ್‌ಗಳಿಗೆ ವರದಿ ಪ್ರಾಧಿಕಾರ ಯಾರೆಂದು ಗೊಂದಲವಾಗಿರುವುದಾಗಿ ಅದಕ್ಕೆ ಸ್ಪಷ್ಟೀಕರಣವನ್ನು ನೀಡುವಂತೆ ಕೋರಲಾಗಿದೆ. ಅದರಂತೆ ಸದರಿ 3 ಮುಖ್ಯ ಇಂಜಿನಿಯರ್‌ಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿ ಬರೆಯುವ ಕುರಿತಂತೆ ಅಧಿಕಾರ ಪ್ರತ್ಯಾಯೋಜಿಸುವ ಬಗ್ಗೆ ಸರ್ಕಾರವು ಪರಿಶೀಲಿಸಿದ್ದು, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 51 ಸೇಇಮು 2010, ಬೆಂಗಳೂರು, ದಿನಾಂಕ : 9ನೇ ಜುಲೈ, 2010**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ವ್ಯಾಪ್ತಿಗೆ ಒಳಪಡುವ ಮುಖ್ಯ ಇಂಜಿನಿಯರ್ ಹುದ್ದೆಗಳಾದ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು ಮುಖ್ಯ ಇಂಜಿನಿಯರ್ ರಾಷ್ಟ್ರೀಯ ಹೆದ್ದಾರಿಗಳು, ಬೆಂಗಳೂರು ಮತ್ತು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ಉತ್ತರ) ಈ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಮುಖ್ಯ ಇಂಜಿನಿಯರ್‌ಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿ ಬರೆಯಲು ಈ ಕೆಳಕಂಡಂತೆ ತಾತ್ಕಾಲಿಕವಾಗಿ ಅಧಿಕಾರ ಪ್ರತ್ಯಾಯೋಜಿಸಲಾಗಿದೆ.

1) ವರದಿ ಪ್ರಾಧಿಕಾರ – ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ
2) ಪುನರಾವಲೋಕನ ಪ್ರಾಧಿಕಾರ – ಸರ್ಕಾರದ ಮುಖ್ಯ ಕಾರ್ಯದರ್ಶಿ
3) ಅಂಗೀಕಾರ ಪ್ರಾಧಿಕಾರ – ಮಾನ್ಯ ಲೋಕೋಪಯೋಗಿ ಸಚಿವರು

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ವಾಸುದೇವಮೂರ್ತಿ**

ಪಿ.ಆರ್. 1815

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವೆಗಳು-3)

## COMMERCE AND INDUSTRIES SECRETARIAT

**SUBJECT :-** Approval to the Project Proposal of M/s. EMCO Power Ltd., to establish a "300 MW Gas based Power Plant" at a suitable location.

**READ :-** Proceedings of the 23rd State High Level Clearance Committee (SHLCC) Meeting held on 19-06-2010.

**PREAMBLE:**

M/s. EMCO Power Ltd., proposes to establish a "300 MW Gas based Power Plant" at a suitable location. with an investment of Rs. 987 crores, generating employment to about 185 persons.

In the 23rd State High Level Clearance Committee (SHLCC) Meeting held on 19-06-2010, the proposal of the Company was discussed and approved.

Government has examined the recommendations made by the State High Level Clearance Committee in its 23rd Meeting held on 19-06-2010, in all aspects.

Hence the following order.

**GOVERNMENT ORDER NO.CI 308 SPI 2010, BANGALORE, DATED : 13TH JULY 2010**

Government is pleased to accord in principle approval to the Project Proposal of M/s. EMCO Power Ltd., to establish a "300 MW Gas based Power Plant" at a suitable location. with an investment of Rs. 987 crores, generating employment to about 185 persons. and extend the following infrastructure facilities, incentives and concessions.

**Infrastructure Facilities :**

1. **Land :** 75 acres - KIADB to acquire and allot as SUC at a suitable location that the company will identify.
2. **Water :** Required water to be supplied by the local authority.
3. **Power :** Required power during the construction phase to be serviced by the respective ESCOM
4. **Incentives & Concessions :** As per prevailing Industrial energy Policy of the State.

**General Terms and Conditions :**

1. **Power Purchase :** The project proponent should make arrangements with KPTCL to supply at least 30% of generated power to the state Grid through PPA with respective ESCOM and approach KERC for price fixation with right of first refusal by ESCOM.
2. **Environment :** The promoters to obtain CFE and CFO from KSPCB and environmental clearance from MOEF, GOI.
2. **Employment :** The Company shall prepare a plan for development of Human Resources required for the project, train local people and provide employment to these trained local youth and comply with the provisions of Industrial Policy of Govt. of Karnataka. A copy of Human Resources Development plan shall be sent to the Commissioner for I.D. & Director of Industries and Commerce for Monitoring.
4. **Vendor Development :** Wherever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.
5. **Social Infrastructure Development :** The Company is advised to take up social infrastructure development projects in the vicinity of the proposed location of the unit. A copy of such projects shall be sent to the Commissioner for I.D. & Director of Industries and Commerce for monitoring.
6. **Other :**
   a) The project proponents shall provide employment to at least one member of the family of each land looser as the land is being acquired through KIADB.
   b) The project proponents shall adopt rainwater harvesting, waste water recycling and water conservation techniques. Zero discharge facility should be adopted wherever applicable.
   b) The promoters shall take all statutory and other necessary clearances from the competent authorities including GOI and shall submit milestones/progress in implementation of the project regularly, which will be monitored by the Department.

This approval is valid for a period of two years from the date of issue.

By order and in the name of the Governor of Karnataka

**APARNA PAVATE**

Desk Officer (Technical Cell)

Commerce & Industries Department.

P.R. 1985

## ಕಂದಾಯ ಸಚಿವಾಲಯ

**ವಿಷಯ** : ಶ್ರೀ ಜೆ. ನಂಜುಂಡೇಶ್ವರ್, ಹಿಂದಿನ ಆಹಾರ ಶಿರಸ್ತೇದಾರ್, ಚನ್ನಗಿರಿ ತಾಲ್ಲೂಕು ಮತ್ತು ಹಿಂದಿನ ತಹಶೀಲ್ದಾರ್, ಗುಬ್ಬಿ ತಾಲ್ಲೂಕು, ಹಾಲಿ ವಜಾಗೊಂಡಿರುವ ಇವರನ್ನು ಸೇವೆಗೆ ಪುನರ್ ಸ್ಥಾಪಿಸುವ ಬಗ್ಗೆ.

**ಓದಲಾಗಿದೆ** :
1) ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂ. ಎಲ್ಒಕೆ/ಐಎಸ್ವಿ(ಜೆ)ಬಿ-25/ಸಿಆರ್-3/93/ಡಿವಿಜಿ, ದಿನಾಂಕ 21-05-2005
2) ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂ. : ಪಿಎಸ್ಸಿ 91 ಸಿಎಸ್ಎಸ್ 05, ದಿನಾಂಕ 05-09-2005.
3) ಸರ್ಕಾರದ ಆದೇಶ ಸಂ. : ಆರ್‌ಡಿ 20 ಎಡಿಇ 2005, ದಿನಾಂಕ 22-09-2006
4) ಮಾನ್ಯ ಉಚ್ಚ ನ್ಯಾಯಾಲಯದ ಕ್ರಿಮಿನಲ್ ಅಪೀಲು ಸಂ: 570/2005-ಅಂತಿಮ ಆದೇಶದ ದಿನಾಂಕ 24-07-2009.
5) ಶ್ರೀ ಜೆ. ನಂಜುಂಡೇಶ್ವರ್, ವಜಾಗೊಂಡಿರುವ ತಹಶೀಲ್ದಾರ್ ಇವರ ಮನವಿ ದಿನಾಂಕ 21-08-2009.
6) ಸರ್ಕಾರದ ಪತ್ರ ಸಂ. : ಆರ್‌ಡಿ 575 ಎಎಸ್‌ಡಿ 2009, ದಿನಾಂಕ 21-11-2009
7) ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಇವರ ಪತ್ರ ಸಂ. ಲೋಕ್/ಐಎನ್ವಿ(ಜೆ)ಜಿ-25/ಸಿಆರ್-3/1993, ಶಿವಮೊಗ್ಗ, ದಿನಾಂಕ 02-02-2010.

**ಪ್ರಸ್ತಾವನೆ :**

ಶ್ರೀ ಜೆ. ನಂಜುಂಡೇಶ್ವರ್, ಹಿಂದಿನ ಆಹಾರ ಶಿರಸ್ತೇದಾರ್, ಚನ್ನಗಿರಿ ತಾಲ್ಲೂಕು/ತಹಶೀಲ್ದಾರ್ ಗುಂಪು-ಬಿ (ನಿಯಮ-32) ಹಾಗೂ ಶ್ರೀ ಎಂ. ಆರ್. ಭೀಮಪ್ಪ, ಹಿಂದಿನ ಆಹಾರ ನಿರೀಕ್ಷಕರು, ಇವರುಗಳು ವೀರಭದ್ರಸ್ವಾಮಿ ಸೀಮೆಎಣ್ಣೆ ವಿತರಕರಿಗೆ ಸೀಮೆಎಣ್ಣೆ ಹಂಚಿಕೆ ನೀಡುವಾಗ ಒತ್ತಾಯಪೂರ್ವಕವಾಗಿ ರೂ. 250-00ಗಳ ಅಕ್ರಮ ಸಂಭಾವನೆಯನ್ನು ದಿನಾಂಕ 29-06-1994 ರಂದು ಪಡೆದಿದ್ದರೆಂಬ ಆರೋಪದ ಹಿನ್ನೆಲೆಯಲ್ಲಿ ಇಲಾಖಾ ವಿಚಾರಣೆ ನಡೆಸುವಂತೆ ಉಪ ಲೋಕಾಯುಕ್ತರು, ಸರ್ಕಾರಕ್ಕೆ ಶಿಫಾರಸ್ಸು ಮಾಡಿದ್ದರ ಮೇರೆಗೆ ಆಹಾರ ನಾಗರೀಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆಯು ದಿನಾಂಕ 24-02-1997ರ ಆದೇಶ ಸಂ. : ಎಫ್‌ಸಿಎಸ್ 199 ಇಎಫ್‌ಟಿ 96 ರಲ್ಲಿ ಕರ್ನಾಟಕ ಗೌರವಾನ್ವಿತ ಲೋಕಾಯುಕ್ತರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 14 ಎ(2)(ಬಿ)ರನ್ವಯ ಇಲಾಖಾ ವಿಚಾರಣೆ ನಡೆಸುವಂತೆ ವಹಿಸಿತ್ತು. ಮಾನ್ಯ ಕರ್ನಾಟಕ ಉಪ ಲೋಕಾಯುಕ್ತರವರು ಉಪ ನಿಬಂಧಕರು, ವಿಚಾರಣೆ-3 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಆದೇಶಿಸಿದ್ದ ಹಿನ್ನೆಲೆಯಲ್ಲಿ, ಈ ಪ್ರಕರಣದಲ್ಲಿ ಇಲಾಖಾ ವಿಚಾರಣೆ ನಡೆಸಿ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ತಮ್ಮ ವಿಚಾರಣಾ ವರದಿಯಲ್ಲಿ ತಿಳಿಸಿದ್ದರ ಹಿನ್ನಲೆಯಲ್ಲಿ, ಅವರುಗಳನ್ನು ಆಪಾದನೆಗಳಿಂದ ದೋಷಮುಕ್ತರನ್ನಾಗಿ ಮಾಡಿ ಸರ್ಕಾರದ ಆದೇಶ ಸಂ. : ಅನಾಸ 199 ಇಎಫ್‌ಟಿ 96, ಬೆಂಗಳೂರು, ದಿನಾಂಕ 17-08-2001ರಲ್ಲಿ ಆಹಾರ ನಾಗರೀಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆ ಆದೇಶಿಸಿತ್ತು.

ಶ್ರೀ ಜೆ. ನಂಜುಂಡೇಶ್ವರ್, ಹಿಂದಿನ ಆಹಾರ ಶಿರಸ್ತೇದಾರ್, ಚನ್ನಗಿರಿ ತಾಲ್ಲೂಕು, ಪ್ರಸ್ತುತ ತಹಶೀಲ್ದಾರ್ ಇವರಿಗೆ ಲಂಚ ಸ್ವೀಕಾರ ಆರೋಪ ಸಾಬೀತಾದ ಹಿನ್ನಲೆಯಲ್ಲಿ, ದಾವಣಗೆರೆ ಜಿಲ್ಲಾ ಹಾಗೂ ಸತ್ರ ನ್ಯಾಯಾಲಯವು 5 ವರ್ಷಗಳ ಕಾರಾಗೃಹ ವಾಸ ಹಾಗೂ 25,000/- ರೂ.ಗಳ ದಂಡವನ್ನು ವಿಧಿಸಿ ದಿನಾಂಕ 28-03-2005ರಂದು ತೀರ್ಪನ್ನು ನೀಡಿದೆ. ಈ ಪ್ರಕರಣಕ್ಕೆ ಸಂಬಂಧಿಸಿದಂತೆ, ನ್ಯಾಯಾಲಯ ಆದೇಶದ ತೀರ್ಪಿನ ಉದ್ಧೃತ ಭಾಗ ಈ ಕೆಳಗಿನಂತಿದೆ.

**ORDER**

The accused No. 1 and 2 are convicted for an offence punishable U/s. 7 of the Prevention of Corruption Act and sentenced to undergo rigorous imprisonment for 1 year and they are also liable to pay a fine of Rs. 10,000/- each or in default to undergo further imprisonment for 2 months more.

They are also convicted for an offence punishable U/s. 13(1)(d) r/w 13(2) of the Prevention of Corruption Act and sentenced to undergo rigorous Imprisonment for 4 years and they are also liable to pay a fine of Rs. 15,000/- each or in default to undergo further imprisonment for 6 months more.

It is further ordered that both the sentences shall run concurrently with each other.

It is further ordered U/s. 428 of the Criminal Procedure Code that the period of detention if any during the pendency of the matter or during investigation shall be given set off.

It is further ordered that the amount seized in this matter i.e., M.O. 6 shall be deposited to the account of the Lokayuktha after proper verification and the other M.Os i.e., M.O. 1 to 5 shall be destroyed as they are valueless after the appeal time is over.

Issue conviction warrant accordingly against the accused.

Ordered accordingly.

Sd/
Special Judge
Davangere

ಮೇಲ್ಕಂಡ ಆದೇಶದ ವಿರುದ್ಧ ದಿನಾಂಕ 4-4-2005 ರಂದು ಕರ್ನಾಟಕ ಉಚ್ಚ ನ್ಯಾಯಾಲಯವು ಸದರಿ ಆರೋಪಿತ ಅಧಿಕಾರಿಯು ಸಲ್ಲಿಸಿದ್ದ ಕ್ರಿಮಿನಲ್ ಅಪೀಲ್ ಸಂ. 570/2005ರಲ್ಲಿ ಮೇಲೆ ತಿಳಿಸಿದ ದಿನಾಂಕ 28-03-2005ರ ದಾವಣಗೆರೆ ಜಿಲ್ಲಾ ನ್ಯಾಯಾಧೀಶರ ಆದೇಶವನ್ನು ಅಮಾನತ್ತಿನಲ್ಲಿರಿಸಲಾಗಿತ್ತು. ಸದರಿ ಆದೇಶದ ಉದ್ಧೃತ ಭಾಗ ಈ ಕೆಳಗಿನಂತಿದೆ :

**ORDER**

Additional S.P.P. take notice

Heard admit

I.A. 1/05 is an application for suspension of sentence passed in SPL, LOK.C. NO. 16/2000 by the District & Session Judge, Davangere dated 28-03-2005 convicting the accused for the offence Under Section 7 and 13(1)(d) read with Section 13(2) of the Prevention of Corruption Act, 1988.

Considering the facts of the case and also the sentence imposed I feel that it is a fit case to suspend the sentence until further orders, subject to the condition that the appellants/accused depositing the fine amount as ordered by the Trial Court within a period of four weeks from today, if not deposited.

The accused are enlarged on bail on their execution of a self-bond for a sum of Rs. 10,000/- each with one surety for the like sum to the satisfaction of the Trail Court, Call for records.

Sd/
Special Judge
Davangere

ಸಿಆಸು ಇಲಾಖೆಯು ಹೊರಡಿಸಿರುವ ಸುತ್ತೋಲೆ ಸಂ. : ಸಿಆಸುಇ 9 ಸೇಇವಿ 95 ದಿನಾಂಕ 26–6–96 ಹಾಗೂ ಸಿಆಸುಇ 08 ಸೇಇವಿ 2000, ದಿನಾಂಕ 29–08–2000ರ ಸುತ್ತೋಲೆಗಳಲ್ಲಿ ಇಂತಹ ಪ್ರಕರಣಗಳಲ್ಲಿ ಸರ್ಕಾರಿ ನೌಕರರ ವಿರುದ್ಧ ಯಾವ ರೀತಿ ಕ್ರಮ ಜರುಗಿಸಬಹುದು ಎಂಬ ಬಗ್ಗೆ ಸೂಕ್ತ ಮಾರ್ಗದರ್ಶನ ನೀಡಿದೆ. ದಿನಾಂಕ 26–6–96ರ ಸುತ್ತೋಲೆಯಲ್ಲಿ ಕಂಡಿಕೆ 3 ರಲ್ಲಿ ಈ ಕೆಳಗಿನಂತೆ ಸ್ಪಷ್ಟಪಡಿಸಿದೆ.

ಸಂವಿಧಾನದ ಅನುಚ್ಛೇದ 311(2)ರಡಿಯಲ್ಲಿ ಎರಡನೇ ಪರಂತುಕದ ಖಂಡ (ಅಟಚಿಣಾಜ) (ಎ) ಯು ಕ್ರಿಮಿನಲ್ ಆರೋಪದ ಮೇಲೆ ದೋಷಸಿದ್ಧಿಯಾಗಿರುವುದನ್ನು ನಿಲಂಬನೆಯಲ್ಲಿಡುವ ಪ್ರಶ್ನೆ ಉದ್ಭವಿಸುವುದಿಲ್ಲ. ಆದ್ದರಿಂದ, ಆಪಾದಿತ ಸರ್ಕಾರಿ ನೌಕರನು ಕ್ರಿಮಿನಲ್ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಿದ್ದಾನೆ ಅಥವಾ ಇತರ ವ್ಯವಹರಣೆ ಹೂಡಿದ್ದಾನೆ; ಅಥವಾ ಮೇಲಿನ ನ್ಯಾಯಾಲಯವು ಕ್ರಿಮಿನಲ್ ನ್ಯಾಯಾಲಯದ ದಂಡನೆ ಆದೇಶವನ್ನು ನಿಲಂಬನೆಯಲ್ಲಿಟ್ಟಿದೆ, ಅಥವಾ ಆತನ ಮೇಲ್ಮನವಿ ಇತ್ಯರ್ಥದಲ್ಲಿರುವಾಗ ಜಾಮೀನಿನ ಮೇಲೆ ಬಿಡುಗಡೆ ಪಡೆದಿದ್ದಾನೆ ಎಂಬ ಕಾರಣಕ್ಕಾಗಿ **ಕರ್ನಾಟಕ ನಾಗರೀಕ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು, ನಿಯಮ 1957ರ ನಿಯಮ 14(1)ರನುಸಾರ ಕ್ರಮ ಜರುಗಿಸುವುದನ್ನು ತಡೆಹಿಡಿಯಬೇಕಾದ ಅಗತ್ಯವಿಲ್ಲ**. ಇಂತಹ ಎಲ್ಲಾ ಸಂದರ್ಭಗಳಲ್ಲಿ ಸೂಕ್ತವಾದ ಕ್ರಮ ಎಂದರೆ, ಒಮ್ಮೆ ಒಬ್ಬ ಸರ್ಕಾರಿ ನೌಕರನು ಕ್ರಿಮಿನಲ್ ನ್ಯಾಯಾಲಯದ ದಂಡನೆಗೆ ಗುರಿಯಾದರೆ, ಆತನು ಸಲ್ಲಿಸಬಹುದಾದ ಮೇಲ್ಮನವಿ ಇತ್ಯರ್ಥವಾಗುವವರೆಗೂ ಕಾಯದೆ ಸಂವಿಧಾನದ ಅನುಚ್ಛೇದ 311(2)ರಡಿಯಲ್ಲಿರುವ ಎರಡನೇ ಪರಂತುಕದ ಸಮರ್ಥನೆ ಪಡೆದಿರುವ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 14(1)ರ ಅನುಸಾರ ಶಿಸ್ತಿನ ಕ್ರಮ ಕೈಗೊಳ್ಳತಕ್ಕದ್ದು. ಇಲ್ಲವಾದಲ್ಲಿ ಕ್ರಿಮಿನಲ್ ನ್ಯಾಯಾಲಯದಲ್ಲಿ ತೀವ್ರ ಆರೋಪಕ್ಕಾಗಿ ದೋಷಸಿದ್ಧಿಯಾಗಿ ದಂಡನೆಗೆ ಗುರಿಯಾದಂತಹ ವ್ಯಕ್ತಿಯು ಸೇವೆಯಲ್ಲಿ ಮುಂದುವರೆಯಲು ಅವಕಾಶ ಕಲ್ಪಿಸಿದಂತಾಗುತ್ತದೆ. ಆದ್ದರಿಂದ, ಮೇಲ್ಮನವಿ ಆದೇಶವು ಇತ್ಯರ್ಥವಾಗುವುದನ್ನು ಕಾಯುವುದು ಸೂಕ್ತವಲ್ಲ, ಆದರೆ, ಒಂದು ವೇಳೆ ಆಪಾದಿತ ಸರ್ಕಾರಿ ನೌಕರನು ಮೇಲಿನ ನ್ಯಾಯಾಲಯದಲ್ಲಿ ಖುಲಾಸೆ (ಂಛಿಕಿಣಣ) ಯಾದರೆ, ಶಿಸ್ತು ಪ್ರಾಧಿಕಾರಿಯು ಆದೇಶವನ್ನು ಪರಿಷ್ಕರಿಸಬಹುದು. ಒಂದು ವೇಳೆ ಸರ್ಕಾರಿ ನೌಕರರನ್ನು ಪುನಃ ಸೇವೆಗೆ ತೆಗೆದುಕೊಂಡಲ್ಲಿ, ಆತನು ಸೇವೆಯಲ್ಲಿ ಮುಂದುವರಿದಿದ್ದರೆ ಅರ್ಹನಾಗಿರುತ್ತಿದ್ದಂಥ ಎಲ್ಲ ಸೌಲಭ್ಯಗಳಿಗೂ ಹಕ್ಕುಳ್ಳವನಾಗುತ್ತಾನೆ.

ಮೇಲ್ಕಂಡ ಸಂದರ್ಭ ಹಾಗೂ ವಿಶೇಷ ನ್ಯಾಯಾಲಯವು ಆಪಾದಿತ ಅಧಿಕಾರಿಗೆ ವಿಧಿಸಿರುವ ಸಜೆ ಮತ್ತು ದಂಡನೆಯ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 14(1)ರ ಅನುಸಾರ ನಿಯಮ 8(ಋ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜೆ. ನಂಜುಂಡೇಶ್ವರ್, ಪ್ರಸ್ತುತ ತಹಶೀಲ್ದಾರ್ ಇವರಿಗೆ ಸೇವೆಯಿಂದ ವಜಾ ದಂಡಣೆ ವಿಧಿಸುವ ಬಗ್ಗೆ ಆಡಳಿತ ಇಲಾಖೆಯು ನಿರ್ಧರಿಸಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿ ಕೋರಲಾಗಿತ್ತು. ಮೇಲೆ ಕ್ರ. ಸಂ. (2)ರಲ್ಲಿ ಓದಲಾದ 5–9–2005ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ಕೆಳಕಂಡಂತೆ ಸಹಮತಿ ನೀಡಿರುತ್ತದೆ.

ಉಲ್ಲೇಖಿತ ಪ್ರಕರಣವನ್ನು ಆಯೋಗವು ಕೂಲಂಕಷವಾಗಿ ಪರಿಶೀಲಿಸಿ, ಶ್ರೀ ಜೆ. ನಂಜುಂಡೇಶ್ವರ್, ಹಿಂದಿನ ಆಹಾರ ಶಿರಸ್ತೇದಾರ್ (ಪ್ರಸ್ತುತ ತಹಶೀಲ್ದಾರ್), ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8(viii) ಕ್ಕೆ ಬದಲಾಗಿ ಅದೇ ನಿಯಮಾವಳಿಗಳ ನಿಯಮ 14(1) ರಡಿಯಲ್ಲಿ ಸೇವೆಯಿಂದ ವಜಾಗೊಳಿಸಲು ಸಹಮತಿಸಿದೆಯೆಂದು ತಿಳಿಸಲು ನಿರ್ದೇಶಿತನಾಗಿದ್ದೇನೆ.

ಶ್ರೀ ಎಂ. ಆರ್. ಭೀಮಪ್ಪ ಮತ್ತು ಶ್ರೀ ಜೆ. ನಂಜುಂಡೇಶ್ವರ್, ಇವರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂ. 6879 ಮತ್ತು 6880/2005ನ್ನು ಸಲ್ಲಿಸಿ, ಶ್ರೀ ಜೆ. ನಂಜುಂಡೇಶ್ವರ್ ರವರನ್ನು ಕೂಡಲೇ ವಜಾ ಮಾಡಲು ಶಿಫಾರಸ್ಸು ಮಾಡಿರುವ ಕರ್ನಾಟಕ ಲೋಕಾಯುಕ್ತದ ಪತ್ರವನ್ನು ತಳ್ಳಿ ಹಾಕಲು (quash) ಕೋರಿದ್ದು, ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ದಿನಾಂಕ 31–8–05ರ ತನ್ನ Interim Order ಸಲ್ಲಿಸಿ, ಶ್ರೀ ಜೆ. ನಂಜುಂಡೇಶ್ವರ್ ರವರನ್ನು ವಜಾ ಮಾಡಲು ಶಿಫಾರಸ್ಸು ಮಾಡಿರುವ ಪತ್ರ ಸಂ. : LOK/INV(chi)B-25/CR-3/43, DVC-4, ದಿನಾಂಕ 21–5–2005ಕ್ಕೆ 8 ವಾರಗಳವರೆಗೆ ತಡೆಯಾಜ್ಞೆ ನೀಡಿದ್ದು, ಕಾಲಕಾಲಕ್ಕೆ ಸದರಿ ತಡೆಯಾಜ್ಞೆಯನ್ನು ವಿಸ್ತರಿಸುತ್ತಾ ಬಂದಿದ್ದು, ಅಂತಿಮವಾಗಿ ದಿನಾಂಕ 29–06–2006ರನ್ನು ತೀರ್ಪಿನಲ್ಲಿ ಈ ಕೆಳಕಂಡಂತೆ ಆದೇಶಿಸಿತ್ತು.

## ORDER

"No representation

Accordingly, applications are dismissed for non-prosecution

ಶ್ರೀ ಎಂ. ಆರ್. ಭೀಮಪ್ಪ, ಆಹಾರ ನಿರೀಕ್ಷಕರವರ ಬಗ್ಗೆ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯು ಪ್ರತ್ಯೇಕವಾಗಿ ಕ್ರಮ ಕೈಗೊಂಡಿರುತ್ತದೆ.

ಸರ್ಕಾರವು ಈ ವಿಷಯವನ್ನು ಕೂಲಂಕುಷವಾಗಿ ಪರಿಶೀಲಿಸಿ, ಶ್ರೀ ಜೆ. ನಂಜುಂಡೇಶ್ವರ್, ಹಿಂದಿನ ಆಹಾರ ಶಿರಸ್ತೇದಾರ್ ಹಾಲಿ ತಹಶೀಲ್ದಾರ್, ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ ಇವರನ್ನು ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಲು ತೀರ್ಮಾನಿಸಿ, 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 14(1)ರ ಅನುಸಾರ ನಿಯಮ 8(ಹು)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಮೇಲೆ ಓದಲಾದ ಕ್ರ.ಸಂ. 3 ದಿನಾಂಕ 22–09–2006ರ ಆದೇಶದಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾಗೊಳಿಸಿ, ಆದೇಶಿಸಲಾಗಿತ್ತು.

ಸದರಿಯವರು ದಾವಣಗೆರೆ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆಯಲ್ಲಿ ವಿಧಿಸಿರುವ ಶಿಕ್ಷೆಯ ಆದೇಶದ ವಿರುದ್ಧ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿದ್ದ ಮೇಲ್ಮನವಿ ಕ್ರಿಮಿನಲ್ ಅಪೀಲು ಸಂ. 570/2005 ಪ್ರಕರಣದಲ್ಲಿ ಉಚ್ಚ ನ್ಯಾಯಾಲಯವು ಮೇಲೆ ಓದಲಾದ ಕ್ರ.ಸಂ. (4)ರ ದಿನಾಂಕ 24–07–2009 ರಂದು ಮಾಡಿರುವ ಅಂತಿಮ ಆದೇಶದಲ್ಲಿ ದಾವಣಗೆರೆ ಜಿಲ್ಲಾ ಸತ್ರ ನ್ಯಾಯಾಲಯವು ನೀಡಿರುವ ತೀರ್ಪನ್ನು ರದ್ದುಗೊಳಿಸಿ ಸದರಿಯವರನ್ನು ದೋಷಮುಕ್ತಗೊಳಿಸಿದೆ. ಆದೇಶದ ಉದ್ಧೃತ ಭಾಗವು ಈ ಕೆಳಗಿನಂತಿದೆ.

For the reasons aforesaid, the present appeal is allowed. The impugned judgement and order of conviction and sentence dated 28-03-2005 in Spl. Lok.C.No. 16/2000 passed by the learned District and Sessions judge, Davangere, is hereby set aside. The appellants accused are hereby acquitted of the said offences. The bail bonds executed by both the appellants shall stand cancelled. If any fine amount has been paid by the accused, the same shall be refunded to them.

ಮೇಲೆ ಓದಲಾದ ಕ್ರ.ಸಂ. (5)ರ ದಿನಾಂಕ 21–08–2009ರ ಮನವಿಯಲ್ಲಿ ಶ್ರೀ ಜೆ. ನಂಜುಂಡೇಶ್ವರ್, ರವರು ಸದರಿ ಉಚ್ಚ ನ್ಯಾಯಾಲಯದ ತೀರ್ಪಿನ ಪ್ರತಿಯನ್ನು ಲಗತ್ತಿಸಿ, ಅವರು ದೋಷ ಮುಕ್ತರಾಗಿರುವುದರಿಂದ, ಸೇವೆಗೆ ಪುನರ್ ನಿಯೋಜಿಸಲು ಕೋರಿರುತ್ತಾರೆ. ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯವು ನೀಡಿದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಲು ಅರ್ಹ ಪ್ರಕರಣವೆ ಎಂಬ ಬಗ್ಗೆ ಮೇಲೆ ಓದಲಾದ ಕ್ರ.ಸಂ. (6)ರ ದಿನಾಂಕ 21–11–2009ರ ಪತ್ರದಲ್ಲಿ ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರನ್ನು ಕೋರಲಾಗಿತ್ತು. ತತ್ಸಂಬಂಧವಾಗಿ, ಮೇಲೆ ಓದಲಾದ ಕ್ರ.ಸಂ. (7)ರ ದಿನಾಂಕ 02–02–2010ರ ಪತ್ರದಲ್ಲಿ ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಕರ್ನಾಟಕ ಉಚ್ಚ ನ್ಯಾಯಾಲಯ ದಿನಾಂಕ 24–07–2009ರಂದು ನೀಡಿರುವ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸಲು ಯೋಗ್ಯವಾಗಿಲ್ಲವೆಂದು ಸರ್ಕಾರವು ಆದೇಶ ಸಂ. ಹೆಚ್.ಡಿ. 8708/ಹೆಚ್‌ಸಿಪಿ–1/2009, ದಿನಾಂಕ 02–01–2010ರಲ್ಲಿ ನಿರ್ಧರಿಸಲಾಗಿದೆಯೆಂದು ತಿಳಿಸಿರುತ್ತಾರೆ.

ಮಾನ್ಯ ಉಚ್ಚ ನ್ಯಾಯಾಲಯವು ಸದರಿ ಪ್ರಕರಣದಲ್ಲಿ ಶ್ರೀ ಜೆ. ನಂಜುಂಡೇಶ್ವರ್, ತಹಶೀಲ್ದಾರ್ ಇವರ ವಿರುದ್ಧ ಹಣ ಸ್ವೀಕೃತ ಆಪಾದನೆಯನ್ನು ಸಾಬೀತು ಪಡಿಸಲಾಗಿಲ್ಲವೆಂಬ ಕಾರಣದ ಮೇಲೆ ಉಚ್ಚ ನ್ಯಾಯಾಲಯವು ಖುಲಾಸೆಗೊಳಿಸಿರುತ್ತದೆ. ಈ ಹಿನ್ನಲೆಯಲ್ಲಿ ಪರಿಶೀಲಿಸಿ, ಸದರಿಯವರನ್ನು ವಜಾಗೊಳಿಸಿದ ಸರ್ಕಾರದ ಆದೇಶ ಸಂ. ಆರ್ ಡಿ 20 ಎಡಿಇ 2005, ದಿನಾಂಕ 22–09–2006ರ ಆದೇಶವನ್ನು ರದ್ದುಗೊಳಿಸಿ, ಸೇವೆಗೆ ಪುನರ್ ಸ್ಥಾಪಿಸಲು ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 575 ಎಎಸ್‌ಡಿ 2009, ಬೆಂಗಳೂರು, ದಿನಾಂಕ: 21–07–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಸರ್ಕಾರದ ಆದೇಶ ಸಂ. ಆರ್ ಡಿ 20 ಎಡಿಇ 2005, ದಿನಾಂಕ 22–09–2006ರ ಆದೇಶವನ್ನು ರದ್ದುಪಡಿಸಿ, ಶ್ರೀ ಜೆ. ನಂಜುಂಡೇಶ್ವರ್, ಹಿಂದಿನ ತಹಶೀಲ್ದಾರ್, ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ ಪ್ರಸ್ತುತ ವಜಾಗೊಂಡಿರುವ ಇವರನ್ನು ಸರ್ಕಾರಿ ಸೇವೆಗೆ ಪುನರ್ ಸ್ಥಾಪಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎಸ್. ಬಿ. ಸಸಾಲಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. 1999

## ಕಂದಾಯ ಸಚಿವಾಲಯ

**ವಿಷಯ** : ಶ್ರೀ ಪಾಂಡುರಂಗ ಭಯ್ಯ, ಹಿಂದಿನ ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು (ಹಾಲಿ ನಿವೃತ್ತ) ಇವರ ವಿರುದ್ಧದ ಇಲಾಖಾ ವಿಚಾರಣೆ ಕುರಿತು.

**ಓದಲಾಗಿದೆ** :
1) ಸರ್ಕಾರದ ಆದೇಶ ಸಂಖ್ಯೆ : ಕಂಇ 99 ಎಡಿಇ 83, ದಿನಾಂಕ 29–8–1983
2) ಸರ್ಕಾರದ ಅಧಿಸೂಚನೆ ಸಂಖ್ಯೆ : ಕಂಇ 99 ಎಡಿಇ 83, ದಿನಾಂಕ 7–3–1984
3) ಕೆ.ಎ.ಟಿ. ಅರ್ಜಿ ಸಂಖ್ಯೆ : 2687/2009ಗೆ ದಿನಾಂಕ 25–1–2010ರ ತೀರ್ಪು

**ಪ್ರಸ್ತಾವನೆ :**

ಶ್ರೀ ಪಾಂಡುರಂಗ ಭಯ್ಯ, ಹಿಂದಿನ ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ಇವರು 1981 ರಿಂದ 1983ರ ಅವಧಿಯಲ್ಲಿ ಸದರಿ ತಾಲ್ಲೂಕಿನಲ್ಲಿ ವೃದ್ಧಾಪ್ಯ ವೇತನ ಮಂಜೂರು ಮಾಡುವಲ್ಲಿ ನಡೆದಿದೆ ಎನ್ನಲಾದ ಅಕ್ರಮಗಳ ಬಗ್ಗೆ ಇತರರೊಂದಿಗೆ ಇವರನ್ನೂ ಸಹ ಒಳಗೊಂಡು ಸಿ.ಓ.ಡಿ. ವಿಚಾರಣೆಗೆ ಪ್ರಕರಣವನ್ನು ವಹಿಸಲಾಗಿತ್ತು. ಅದರಂತೆ ಸಿ.ಓ.ಡಿಯು ಸಲ್ಲಿಸಿರುವ ವರದಿಯಲ್ಲಿ, ಅಂದಿನ ತಹಶೀಲ್ದಾರರಾಗಿದ್ದ ಶ್ರೀ ಪಾಂಡುರಂಗ ಭಯ್ಯ ಮತ್ತು ಅವರ ಕಛೇರಿಯ ಇತರೆ ಸಿಬ್ಬಂದಿಗಳು ಕಾನೂನುಬಾಹಿರವಾಗಿ 190 ಪ್ರಕರಣಗಳಲ್ಲಿ ಭಾಗಿಯಾಗಿ ವೃದ್ಧಾಪ್ಯ ವೇತನಮಂಜೂರು ಮಾಡಿರುವ ಆರೋಪ ಸಾಬೀತಾಗಿರುವುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ 29–8–1983ರ ಆದೇಶದಲ್ಲಿ ಸದರಿಯವರನ್ನು ಅಮಾನತ್ತುಗೊಳಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ 7-3-1984ರ ಅಧಿಸೂಚನೆಯಲ್ಲಿ ಶ್ರೀ ಪಾಂಡುರಂಗ ಭಯ್ಯ, ಹಿಂದಿನ ತಹಶೀಲ್ದಾರ್, ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಅವರ ಅಮಾನತ್ತನ್ನು ತೆರವುಗೊಳಿಸಿ ಅವರನ್ನು ತಹಶೀಲ್ದಾರ್, ರಾಯಭಾಗ ಇಲ್ಲಿಗೆ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಲಾಗಿತ್ತು. ನಂತರ ಸದರಿ ಅಧಿಕಾರಿಯು ದಿನಾಂಕ 31-12-2002ರಲ್ಲಿ ವಯೋನಿವೃತ್ತಿ ಹೊಂದಿರುತ್ತಾರೆ.

ಪೊಲೀಸ್ ಇನ್ಸ್‌ಪೆಕ್ಟರ್, ಅಲಸೂರುಗೇಟ್ ಪೊಲೀಸ್ ಠಾಣೆ, ಬೆಂಗಳೂರು ಇವರ ದಿನಾಂಕ 6-9-2003 ರಂದು ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ಇವರಿಗೆ ಬರೆದ ಪತ್ರದಲ್ಲಿ ಶ್ರೀ ಪಾಂಡುರಂಗ ಭಯ್ಯ, ಹಿಂದಿನ ತಹಶೀಲ್ದಾರ್, ಇವರ ವಿರುದ್ಧದ ವೃದ್ಧಾಪ್ಯ ವೇತನ ಮಂಜೂರಾತಿ ಅಕ್ರಮದ ಬಗ್ಗೆ ಅಲಸೂರು ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ 397/1999ನ್ನು ದಾಖಲು ಮಾಡಿಕೊಂಡು, ತನಿಖೆ ಕೈಗೊಂಡು, ಪ್ರಕರಣಕ್ಕೆ ಸಂಬಂಧಪಟ್ಟ ದಾಖಲೆಗಳನ್ನು ನೀಡುವಂತೆ ಬೆಂಗಳೂರು ಉತ್ತರ ತಾಲ್ಲೂಕು ತಹಶೀಲ್ದಾರ್ ರವರನ್ನು ಕೋರಿದಾಗ್ಯೂ ಸಹ ದಾಖಲೆಗಳನ್ನು ನೀಡಿ ತನಿಖೆಗೆ ಸಹಕರಿಸಿರುವುದಿಲ್ಲವಾದ್ದರಿಂದ, ಪ್ರಕರಣವು ದಾಖಲಾಗಿ 3 ವರ್ಷಗಳಾಗಿದ್ದು ಸಾಕ್ಷಾಧಾರಗಳು ದೊರೆಯದ ಕಾರಣ ಈ ಪ್ರಕರಣದಲ್ಲಿ ಸಾಕ್ಷಾಧಾರಗಳು ಇಲ್ಲದ ಮೊಕದ್ದಮೆ ಎಂದು ಪರಿಗಣಿಸಿ, ಮಾನ್ಯ ನ್ಯಾಯಾಲಯಕ್ಕೆ ಅಂತಿಮ ವರದಿಯನ್ನು ದಿನಾಂಕ 20-8-2002 ರಂದು ನೀಡಲಾಗಿರುತ್ತದೆ ಎಂದು ತಿಳಿಸಿದ್ದಾರೆ.

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ನೃಪತುಂಗ ರಸ್ತೆ, ಬೆಂಗಳೂರು ಇವರು ತಮ್ಮ ದಿನಾಂಕ 2-4-2007ರ ಪತ್ರದಲ್ಲಿ ಮೊಕದ್ದಮೆ ಸಂಖ್ಯೆ : 397/1999ಕ್ಕೆ ಸಂಬಂಧಿಸಿದಂತೆ ದಾಖಲಾತಿಗಳನ್ನು ಹಾಜರು ಪಡಿಸಿದಲ್ಲಿ, ಈಗಾಗಲೇ ನ್ಯಾಯಾಲಯಕ್ಕೆ ಸಲ್ಲಿಸಿರುವ ಸಿ-ಅಂತಿಮ ವರದಿಯನ್ನು ಹಿಂದಕ್ಕೆ ಪಡೆದು, ಅನುಮತಿ ಪಡೆದು ದೋಷಾರೋಪಣ ಪಟ್ಟಿಯನ್ನು ಸಲ್ಲಿಸಲಾಗುವುದು ಎಂದು ತಿಳಿಸಿರುತ್ತಾರೆ.

ಪ್ರಕರಣವನ್ನು ಪರಿಶೀಲಿಸಲಾಗಿ, ಶ್ರೀ ಪಾಂಡುರಂಗ ಭಯ್ಯ, ಹಿಂದಿನ ತಹಶೀಲ್ದಾರ್, (ಹಾಲಿ ನಿವೃತ್ತ) ಅವರು ಸೇವೆಯಲ್ಲಿರುವಾಗಲೀ ಅಥವಾ ಸೇವೆಯಿಂದ ನಿವೃತ್ತಿ ಹೊಂದಿದ ನಂತರವಾಗಲೀ ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆಯನ್ನು ಹೂಡಿರುವುದಿಲ್ಲ. ಸದರಿಯವರು ದಿನಾಂಕ 31-12-2002 ರಂದು ವಯೋನಿವೃತ್ತಿ ಹೊಂದಿದ್ದು, ಅವರಿಗೆ ನೀಡಬೇಕಾದ ರೂ. 10,000/-ಗಳ ಡಿ.ಸಿ.ಆರ್.ಜಿ. ಮೊತ್ತವನ್ನು ತಡೆಹಿಡಿಯಲಾಗಿರುತ್ತದೆ. ಆದ್ದರಿಂದ ಶ್ರೀ ಪಾಂಡುರಂಗ ಭಯ್ಯ, ಹಿಂದಿನ ತಹಶೀಲ್ದಾರ್, (ಹಾಲಿ ನಿವೃತ್ತ) ರವರು ಕೆ.ಎ.ಟಿ.ಯಲ್ಲಿ ಅರ್ಜಿ ಸಂಖ್ಯೆ 2687/2009ನ್ನು ದಾಖಲಿಸಿದ್ದು ದಿನಾಂಕ 25-1-2010 ರಂದು ಮಾನ್ಯ ಕೆ.ಎ.ಟಿ.ಯು ಅಂತಿಮ ತೀರ್ಪು ನೀಡಿರುತ್ತದೆ. ಮಾನ್ಯ ಕೆ.ಎ.ಟಿ.ಯು ಶ್ರೀ ಪಾಂಡುರಂಗ ಭಯ್ಯ, ಹಿಂದಿನ ತಹಶೀಲ್ದಾರ್, (ಹಾಲಿ ನಿವೃತ್ತ) ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆಯನ್ನು ಹೂಡದೇ ಇರುವುದರಿಂದ, ಮೂರು ತಿಂಗಳ ಒಳಗಾಗಿ ತಡೆಹಿಡಿಯಲಾಗಿದ್ದ ಡಿ.ಸಿ.ಆರ್.ಜಿ. ಮೊತ್ತ ಮತ್ತು ಅದಕ್ಕೆ ಬಡ್ಡಿಯನ್ನು ಮತ್ತು ದಿನಾಂಕ 19-9-1983 ರಿಂದ 18-3-1984 ರವರೆಗಿನ ಅಮಾನತ್ತಿನ ಅವಧಿಯನ್ನು ಕರ್ತವ್ಯದ ಅವಧಿ ಎಂದು ಪರಿಗಣಿಸುವಂತೆ ಆದೇಶಿಸಿರುತ್ತದೆ. ಪ್ರಕರಣವು 1981 ರಿಂದ 1983 ರವರೆಗಿನ ಅವಧಿಯಲ್ಲಿ ನಡೆದಿದ್ದು, ಸುಮಾರು 20 ವರ್ಷಗಳು ಕಳೆದಿದ್ದು, ಶ್ರೀ ಪಾಂಡುರಂಗ ಭಯ್ಯ, ಹಿಂದಿನ ತಹಶೀಲ್ದಾರ್, (ಹಾಲಿ ನಿವೃತ್ತ) ಇವರು 2002ರಲ್ಲಿ ನಿವೃತ್ತಿ ಹೊಂದಿರುವುದರಿಂದ, ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಕುರಿತು ಇಷ್ಟು ಸುದೀರ್ಘ ವಿಳಂಬದ ನಂತರ ಈ ಹಂತದಲ್ಲಿ ಇಲಾಖಾ ವಿಚಾರಣೆ ಪ್ರಾರಂಭಿಸುವುದು ಕಾನೂನುಬದ್ಧವಾಗಿ ಸಾಧ್ಯವಾಗಲಾರದು ಹಾಗೂ ಹಣಕಾಸಿನ ಅವ್ಯವಹಾರ ಎಸಗಿದ್ದರೆ ಸಿವಿಲ್ ದಾವೆ ಹೂಡಿ ಹಣ ವಸೂಲಿ ಮಾಡಬಹುದೆಂದು ಮತ್ತು ಜಿಲ್ಲಾಧಿಕಾರಿಗಳು ತಮ್ಮ ದಿನಾಂಕ 28-11-1990 ರಂದು ವೃದ್ಧಾಪ್ಯ ವೇತನ ಮಂಜೂರು ಮಾಡಿರುವ ಬಗ್ಗೆ ಯಾವುದೇ ಅವ್ಯವಹಾರ ನಡೆದಿಲ್ಲವೆಂಬ ಬಗ್ಗೆ ಸರ್ಕಾರದ ಗಮನಕ್ಕೆ ತಂದಿರುತ್ತಾರೆ. ಅವರ ವಿರುದ್ಧ ಮೊಕದ್ದಮೆ ಸಂಖ್ಯೆ 397/1999 ಯು ಅಕ್ರಮಗಳ ವ್ಯವಹಾರದ ಬಗ್ಗೆ ದಾಖಲೆಗಳು ಲಭ್ಯವಿಲ್ಲವೆಂದು ಮತ್ತು ಪೊಲೀಸ್ ಇಲಾಖೆಯವರು ನ್ಯಾಯಾಲಯಕ್ಕೆ ಬಿ-ರಿಪೋರ್ಟ್ ಹಾಕಿರುವುದರಿಂದ ಸದರಿ ನೌಕರರ ಮೇಲೆ ಇಲಾಖಾ ವಿಚಾರಣೆ ನಡೆಸಲು ಕೆ.ಸಿ.ಎಸ್.ಆರ್. ನಿಯಮ 214ರಲ್ಲಿ ಅವಕಾಶ ಇಲ್ಲ. ಈ ಎಲ್ಲಾ ಹಿನ್ನೆಲೆಯಲ್ಲಿ, ಕೆ.ಎ.ಟಿ. ಆದೇಶದಂತೆ ಶ್ರೀ ಪಾಂಡುರಂಗ ಭಯ್ಯ, ಹಿಂದಿನ ತಹಶೀಲ್ದಾರ್, (ಹಾಲಿ ನಿವೃತ್ತ) ಇವರ ದಿನಾಂಕ 19-9-1983 ರಿಂದ 18-3-1984 ರವರೆಗಿನ ಅಮಾನತ್ತಿನ ಅವಧಿಯನ್ನು ಕರ್ತವ್ಯದ ಅವಧಿ ಎಂದು ಮತ್ತು ಅವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈಬಿಟ್ಟು ಹಾಗೂ ಪ್ರಕರಣವನ್ನು ಮುಕ್ತಾಯಗೊಳಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 611 ಬಿಎಂಎಂ 2007, ಬೆಂಗಳೂರು, ದಿನಾಂಕ: 21-07-2010**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಸರ್ಕಾರವು ಶ್ರೀ ಪಾಂಡುರಂಗ ಭಯ್ಯ, ಹಿಂದಿನ ತಹಶೀಲ್ದಾರ್, (ಹಾಲಿ ನಿವೃತ್ತ) ಕೆ.ಎ.ಎಸ್. ಕಿರಿಯ ಶ್ರೇಣಿ ಅಧಿಕಾರಿ ಇವರ ದಿನಾಂಕ 19-9-1983 ರಿಂದ 18-3-1984 ರವರೆಗಿನ ಅಮಾನತ್ತಿನ ಅವಧಿಯನ್ನು ಕರ್ತವ್ಯದ ಅವಧಿ ಎಂದು ಪರಿಗಣಿಸಿ ಹಾಗೂ ಅವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈಬಿಟ್ಟು ಪ್ರಕರಣವನ್ನು ಮುಕ್ತಾಯಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಸ್. ಬಿ. ಸಸಾಲಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು-3)

ಪಿ.ಆರ್. 2000

## ಕಂದಾಯ ಸಚಿವಾಲಯ

**ವಿಷಯ** : ಬಸವಕಲ್ಯಾಣ ಅಭಿವೃದ್ಧಿ ಮಂಡಳಿಗೆ ಅಧಿಕಾರೇತರ ಸದಸ್ಯರನ್ನು ನಾಮನಿರ್ದೇಶನ ಮಾಡುವ ಬಗ್ಗೆ.
**ಓದಲಾಗಿದೆ** : ಸರ್ಕಾರಿ ಆದೇಶ ಸಂಖ್ಯೆ ಕಂಇ 162 ಆರ್‌ಇಹೆಚ್ 2008, ದಿನಾಂಕ 18-11-2009

***

**ಪ್ರಸ್ತಾವನೆ :**

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಬಸವಕಲ್ಯಾಣ ಅಭಿವೃದ್ಧಿ ಮಂಡಳಿಯ ಅಧಿನಿಯಮ 2005ರ (ಕರ್ನಾಟಕ ಅಧಿನಿಯಮ 13/2005) ಪ್ರಕರಣ 3(ಜಿ) ಮತ್ತು 3(ಆರ್) ರನ್ವಯ 10 ಜನರನ್ನು ಬಸವಕಲ್ಯಾಣ ಅಭಿವೃದ್ಧಿ ಮಂಡಳಿಯ ಸದಸ್ಯರನ್ನಾಗಿ ನಾಮನಿರ್ದೇಶನ ಮಾಡಲಾಗಿರುತ್ತದೆ.

ಸರ್ಕಾರವು ಬಸವಕಲ್ಯಾಣ ಅಭಿವೃದ್ಧಿ ಮಂಡಳಿಯನ್ನು ಪುನರ್ ರಚಿಸಲು ನಿರ್ಧರಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 55 ಆರ್‌ಇಹೆಚ್ 2010, ಬೆಂಗಳೂರು, ದಿನಾಂಕ: 19–07–2010**

ಸರ್ಕಾರವು ಬಸವಕಲ್ಯಾಣ ಅಭಿವೃದ್ಧಿ ಮಂಡಳಿಯ ಅಧಿನಿಯಮ 2005ರ (ಕರ್ನಾಟಕ ಅಧಿನಿಯಮ 13/2005) ಪ್ರಕರಣ 3(ಆರ್) ರನ್ವಯ ಮಂಡಳಿಯ ಹಾಲಿ ಸದಸ್ಯರಾದ ಡಾ॥ ಎಂ. ಎಸ್. ಕಲಬುರ್ಗಿ, ನಿವೃತ್ತ ಉಪ ಕುಲಪತಿಗಳು, ಹಂಪಿ ವಿಶ್ವವಿದ್ಯಾಲಯ, ಧಾರವಾಡ, ಇವರ ಬದಲಿಗೆ ಶ್ರೀ ಮ.ನಿ.ಪ್ರ ಶಿವಾನಂದ ಮಹಾಸ್ವಾಮಿಗಳು ಶ್ರೀ ಗುರುಬಸವೇಶ್ವರ ವಿರಕ್ತಮಠ, ಹುಲಸೂರ, ಬಸವಕಲ್ಯಾಣ ತಾಲ್ಲೂಕು, ಬೀದರ್ ಜಿಲ್ಲೆ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಬಸವಕಲ್ಯಾಣ ಅಭಿವೃದ್ಧಿ ಮಂಡಳಿಯ ಸದಸ್ಯರನ್ನಾಗಿ ನಾಮನಿರ್ದೇಶನ ಮಾಡಿ ಆದೇಶಿಸಿದೆ.

2. ಬಸವಕಲ್ಯಾಣ ಅಭಿವೃದ್ಧಿ ಮಂಡಳಿ ಅಧಿನಿಯಮದ ಪ್ರಕರಣ 4ರಲ್ಲಿ ನಿರ್ದಿಷ್ಟಪಡಿಸಿದಂತೆ ಸರ್ಕಾರದ ಇಚ್ಛೆಗೆ ಒಳಪಟ್ಟು ನಾಮನಿರ್ದೇಶಿತರಾಗಿರುವ ಅಧಿಕಾರೇತರ ಸದಸ್ಯರು ಮೂರು ವರ್ಷಗಳ ಅವಧಿಗೆ ಪದಧಾರಣ ಮಾಡುವರು, ನಾಮ ನಿರ್ದೇಶಿತ ಸದಸ್ಯರು ನಿಯಮಾನುಸಾರ ಲಭ್ಯವಾಗುವ ಭತ್ಯೆಗಳನ್ನು ಪಡೆಯುವರು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಂ. ವೆಂಕಟೇಶಮೂರ್ತಿ)**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 2001 ಕಂದಾಯ ಇಲಾಖೆ (ಪುನರ್ವಸತಿ)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ** : ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ನಿಡಶೇಷಿ ಸಣ್ಣ ನೀರಾವರಿ ಕೆರೆ ವೇಸ್ಟ್‌ವೇರ್ ನಿರ್ಮಾಣಕ್ಕೆ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ** : ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ/ಇವರ ದಿನಾಂಕ 28–01–2010ರ ಪತ್ರ ಸಂಖ್ಯೆ ಮುಇಂ/ಸನೀ/(ಉ)ವ/ಬಿಜಾ/ಭೂಸ್ವಾಪ್ರ/2009–10/546

***

**ಪ್ರಸ್ತಾವನೆ :**

ಮೇಲೆ ಓದಲಾದ ವಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರ ಪತ್ರದಲ್ಲಿ ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ನಿಡಶೇಷಿ ಸಣ್ಣ ನೀರಾವರಿ ಕೆರೆ ವೇಸ್ಟ್‌ವೇರ್ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಕುಷ್ಟಗಿ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ.

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 06–12–2001
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರಧನದ ಐತೀರ್ಪು ಘೋಷಿಸಿದ ದಿನಾಂಕ 22–09–2003.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರ ಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಕುಷ್ಟಗಿ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ.

ಸಿವಿಲ್ ನ್ಯಾಯಾಲಯ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯ ದಿನಾಂಕ 10–02–2009 ರಲ್ಲಿ ಅಭಿಪ್ರಾಯ ನೀಡಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ.

| ಕ್ರ. ಸಂ. | ಎಲ್‌ಎಸಿ ಸಂಖ್ಯೆ | ಮದಲಗಟ್ಟಿ ಗ್ರಾಮದ ಸ.ನಂ. | ವಿಸ್ತೀರ್ಣ ಎ.ಗುಂ. | ಪರಿಹಾರ ಮೊತ್ತ ಲಕ್ಷ ರೂ.ಗಳಲ್ಲಿ |
|---|---|---|---|---|
| 1. | 534/08 | 5/5/ಪಿ2 | 2–00 | 6,59,496–00 |
| 2. | 535/08 | 5/5/ಪಿ1 | 2–00 | 6,59,496–00 |
| | | | | 13,18,992–00 |

ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸನೀಇ 24 ಭೂಸ್ವಾಪ್ರ 2010, ಬೆಂಗಳೂರು, ದಿನಾಂಕ 23ನೇ ಜುಲೈ, 2010**

ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ನಿಡಶೇಷಿ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಮದಲಗಟ್ಟಿ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಹಾಕಿದ ಪರಿಹಾರ ಧನದ ಮೊತ್ತ ರೂ. 13,18,992–00ಗಳನ್ನು (ಹದಿಮೂರು ಲಕ್ಷದ ಹದಿನೆಂಟು ಸಾವಿರದ ಒಂಭೈನೂರ ತೊಂಭತ್ತೆರಡು ರೂಪಾಯಿಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2010–11ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನು ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 01 ಟಿಎಫ್‌ಪಿ 2008 ದಿನಾಂಕ 16–05–2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಹೆಚ್. ಎಸ್. ಉದಯಕುಮಾರ್)**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 2002

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ** : ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯಲ್ಲಿ ಪುರಾತತ್ವ ಸಂರಕ್ಷಣಾ ಅಭಿಯಂತರರ ಹುದ್ದೆಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ** :
1) ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 267 ಕೆಎಂಯು 2007, ದಿನಾಂಕ 31–01–2008
2) ಸರ್ಕಾರದ ಅಧಿಸೂಚನೆ ಸಂಖ್ಯೆ : ಕಸಂವಾಪ್ರ 102 ಕೆಎಂಯು 2008, ದಿನಾಂಕ 17–10–2008
3) ಆಯುಕ್ತರು, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಇವರ ಪತ್ರ ಸಂಖ್ಯೆ : ಅಪ್ರಾಸಂಪ/ಪು.ಸಂ.ಇಂಜಿನಿಯರ್/2009–10/255, ದಿನಾಂಕ 25–09–2009.
4) ಸರ್ಕಾರದ ಅಧಿಸೂಚನೆ ಸಂಖ್ಯೆ : ಕಸಂವಾಪ್ರ 211 ಕೆಎಂಯು 2009, ದಿನಾಂಕ 18–11–2009
5) ಆಯುಕ್ತರು, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಇವರ ಪತ್ರ ಸಂಖ್ಯೆ : ಅಪ್ರಾಸಂಪ/ಪು.ಸಂ.ಇಂ.ಹು.ಮುಂ/2009–10/491, ದಿನಾಂಕ 02–03–2010

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 31–01–2008ರ ಸರ್ಕಾರಿ ಆದೇಶದಲ್ಲಿ ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯಲ್ಲಿ 2007–08ನೇ ಹೊಸ ಘಟಕಗಳಿಗೆ ಹುದ್ದೆಗಳ ಸೃಜನೆಗೆ ಸಂಬಂಧಿಸಿದಂತೆ ಇಲಾಖೆಗೆ ಅದ್ಯರ್ಪಿಸಲಾಗಿರುವ ಪತ್ರಾಂಕಿತ ವ್ಯವಸ್ಥಾಪಕರ ಹುದ್ದೆಗೆ ಬದಲಾಗಿ ಒಂದು ಪುರಾತತ್ವ ಸಂರಕ್ಷಣಾ ಇಂಜಿನಿಯರ್ ಹುದ್ದೆಯನ್ನು ವೇತನ ಶ್ರೇಣಿ ರೂ. 14050–25050ರಲ್ಲಿ ಸೃಜಿಸಲಾಗಿದೆ ಮತ್ತು ಈ ಹುದ್ದೆಗೆ ಲೋಕೋಪಯೋಗಿ ಇಲಾಖೆಯಿಂದ ನಿಯೋಜನೆ ಮೇರೆಗೆ ಅಭ್ಯರ್ಥಿಯನ್ನು ಪಡೆಯಲು ಅನುಮತಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ 17–10–2008ರ ಪತ್ರದಲ್ಲಿ ಅಧಿಸೂಚನೆಯಲ್ಲಿ ಡಾ|| ಜಗದೀಶ್, ಕಾರ್ಯಪಾಲಕ ಇಂಜಿನಿಯರ್–1, ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ ನಿಯಮಿತ, ಇವರನ್ನು ಒಂದು ವರ್ಷದ ಅವಧಿಯವರೆಗೆ ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಲಾಗಿದೆ.

ಮೇಲೆ (3)ರಲ್ಲಿ ಓದಲಾದ ದಿನಾಂಕ 25–09–2009ರ ಪತ್ರದಲ್ಲಿ ಆಯುಕ್ತರು, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಇವರು ಪ್ರಸ್ತಾವನೆ ಸಲ್ಲಿಸಿ 2006–07ನೇ ಸಾಲಿನಿಂದ ಇಲಾಖೆವತಿಯಿಂದ ಕೈಗೊಂಡಿರುವ ಕಾಮಗಾರಿಗಳಲ್ಲಿ ಕೆಲವು ಕಾಮಗಾರಿಗಳು ಮುಗಿದಿದ್ದು ಮತ್ತೆ ಕೆಲವು ಕಾಮಗಾರಿಗಳು ಮುಕ್ತಾಯದ ಹಂತದಲ್ಲಿವೆ. ಉಳಿಕೆ ಕಾಮಗಾರಿಗಳಿಗೆ ಟೆಂಡರ್ ಕರೆಯಲಾಗಿದ್ದು ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಬೇಕಾಗಿರುತ್ತದೆ. ಆದ್ದರಿಂದ ಡಾ|| ಜಗದೀಶ್ ಇವರ ಗುತ್ತಿಗೆ ಆಧಾರದ ನೇಮಕಾತಿ ಅವಧಿಯನ್ನು ಮಾರ್ಚ್ 2010ರವರೆಗೆ ಮುಂದುರೆಸಲು ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ದಿನಾಂಕ 18–11–2009ರ ಅಧಿಸೂಚನೆಯಲ್ಲಿ ಡಾ|| ಜಗದೀಶ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್–1, ಇವರ ಸೇವೆಯನ್ನು ದಿನಾಂಕ 31–03–2010ರ ವರೆಗೆ ಮುಂದುವರೆಸಿ ಆದೇಶಿಸಲಾಗಿದೆ.

ಮೇಲೆ (5)ರಲ್ಲಿ ಓದಲಾದ ದಿನಾಂಕ 02–03–2010ರ ಪತ್ರದಲ್ಲಿ ಆಯುಕ್ತರು, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಇವರು ಪ್ರಸ್ತಾವನೆ ಸಲ್ಲಿಸಿ ಸರ್ಕಾರದಿಂದ ಘೋಷಿಸಲ್ಪಟ್ಟಿರುವ ಆರು ಪಾರಂಪರಿಕ ಪ್ರದೇಶಗಳ ಸಂರಕ್ಷಣಾ ಕಾಮಗಾರಿಗಳ ಉಸ್ತುವಾರಿಗಳನ್ನು ಕೈಗೊಳ್ಳಲಾಗುತ್ತಿರುವುದರಿಂದ ಇಂಜಿನಿಯರ್‌ಗಳ ಸೇವೆಯು ಅತ್ಯಂತ ಅವಶ್ಯಕತೆಯಿರುವುದಾಗಿ ತಿಳಿಸಿ, ಪ್ರಸ್ತುತ ಪುರಾತತ್ವ ಸಂರಕ್ಷಣಾ ಇಂಜಿನಿಯರ್ ಆಗಿ ಸೇವೆ ಸಲ್ಲಿಸುತ್ತಿರುವ ಲೋಕೋಪಯೋಗಿ ಇಲಾಖೆಯ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಡಾ|| ಜಗದೀಶ್ ಇವರ ಸೇವೆಯನ್ನು ಪಡೆಯಲು ದಿನಾಂಕ 01–04–2010 ರಿಂದ ಮತ್ತೊಂದು ವರ್ಷಕ್ಕೆ ಹುದ್ದೆಯನ್ನು ಮುಂದುವರೆಸಿ ಆದೇಶಿಸುವಂತೆ ಕೋರಿರುತ್ತಾರೆ.

ಇದನ್ನು ಪರಿಶೀಲಿಸಿದ ಸರ್ಕಾರವು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯಲ್ಲಿ ಸೃಜಿಸಿರುವ ಒಂದು ಪುರಾತತ್ವ ಸಂರಕ್ಷಣಾ ಇಂಜಿನಿಯರ್ ಹುದ್ದೆಯನ್ನು ದಿನಾಂಕ 01–04–2010 ರಿಂದ ಇನ್ನೊಂದು ವರ್ಷದ ಅವಧಿಗೆ ಮುಂದುವರೆಸಿ, ಡಾ|| ಜಗದೀಶ್ ಇವರನ್ನು ಸದರಿ ಹುದ್ದೆಯಲ್ಲಿ ಮುಂದುವರೆಸಲು ತೀರ್ಮಾನಿಸಿದೆ. ಆದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 57 ಕೆಎಂಯು 2010, ಬೆಂಗಳೂರು, ದಿನಾಂಕ 15ನೇ ಜುಲೈ, 2010**

ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯಲ್ಲಿನ ಒಂದು ಪುರಾತತ್ವ ಸಂರಕ್ಷಣಾ ಇಂಜಿನಿಯರ್ ಹುದ್ದೆಯನ್ನು ದಿನಾಂಕ 01–04–2010 ರಿಂದ 31–03–2011 ರವರೆಗಿನ ಅವಧಿಗೆ ಮುಂದುವರೆಸಿ, ಶ್ರೀ ಜಗದೀಶ್ ಇವರನ್ನು ಸದರಿ ಹುದ್ದೆಯಲ್ಲಿ ಮುಂದುವರೆಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10–7–1996ರಲ್ಲಿ ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಆದೇಶದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎಂ. ಕೆ. ಧರ್ಮರಾಜಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

ಪಿ.ಆರ್. 2003

## INFORMATION TECHNOLOGY, BIO-TECHNOLOGY AND SCIENCE AND TECHNOLOGY SECRETARIAT

**Sub :-** Proposal for setting up of Bio IT Centre at IBAB, Bangalore – release of grants.

**Read :-** 1. Government Order No. ITD 49 MDA 2008, Dated 31-3-2010.

2. Minutes of the 1st meeting of the Project Review and Steering Group (PRSG) constituted by the DIT, GOI to oversee the Bio-IT Research and Training Centre held on 1-7-2010 forwarded by the Director, IBAB vide E-mail dated 20.7.2010.

***

**Preamble:**

In the Government Order dated 31-3-2010 read at (1) above, Government had approved for setting up of Bio IT Centre at IBAB Campus, in Biotech Park, Electronics City, 1st Phase, Bangalore with an outlay of Rs. 19.51 crores spread over a period of 5 years and released an amount of Rs. 1.00 crore to IBAB towards Karnataka State Contribution.

In the 1st meeting of the PRSG held on 1-7-2010 at IBAB, Bangalore, while reviewing the Bio-IT Research & Training Facility Project, the Director, IBAB has presented his requirement of funds and requested for release of Rs.7.79 crores from DIT (GOI) and Rs.4.00 crores from Government of Karnataka towards procurement of equipments, analysis infrastructure, operational and set-up cost. The PRSG recommended for the release of Rs. 5.00 crores from DIT (GOI) and Rs. 3.00 crores from Government of Karnataka, immediately to initiate the procurement process.

In the 2010-11 Budget, an amount of Rs. 5.00 crores has been earmarked to IBAB for setting up of Bio IT Facility under the Head of Account **"3451-00-090-2-22 Institute of Bio-informatics and Applied Bio-technology (IBAB) – 100 – Financial Assistance / Relief (Plan)".** It is considered to release Rs. 1.00 crore as per the deligation of powers to the Principal Secretary for the present. Hence, the Orders.

**Government Order No. ITD 49 MDA 2008, Bangalore, dated : 24-07-2010**

In the circumstances explained in the preamble, Government are pleased to accord approval for release of Rs.1.00 Crore [Rupees One Crore only] to the Director, Institute of Bio-informatics and Applied Bio-technology [IBAB] for procurement of equipments, analysis infrastructure, operational and set-up cost in respect of the Project (Bio-IT Research & Training Facility Project) through the Director of Information Technology and Biotechnology).

The expenditure on this account shall be met out of the grants provided under Head of Account **"3451-00-090-2-22 Institute of Bio-informatics and Applied Bio-technology (IBAB) – 100 – Financial Assistance / Relief (Plan)".** For the year 2010-11.

The Administrative Officer, Directorate of Information Technology & Bio Technology Department shall draw the said grant from the Treasury duly countersigned by the Director, Information Technology & Bio-technology and disburse the amount.

The Director, Institute of Bio-informatics and Applied Bio-technology [IBAB] shall submit the Utilization Certificate in the prescribed format through the Director, Information Technology and Bio-technology, Bangalore.

This order issues with the concurrence of Government Order No. FD 1 TFP 2008, dated 16-5-2008.

By Order and in the name of the Governor of Karnataka

**(M.V. KRISHNAMURTHY),**

Under Secretary to Government,

Information Technology, Bio-technology and

Science and Technology Department.

P.R. 1935

## ಒಳಾಡಳಿತ ಸಚಿವಾಲಯ

**ವಿಷಯ :** ಮಡಿಕೇರಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ಎಸ್.ಸಿ. 15/01 ರಲ್ಲಿ ಎಸಗಿರುವ ಲೋಪಕ್ಕೆ ಸಂಬಂಧಿಸಿದಂತೆ ಶ್ರೀ ಎಂ. ನರಸಪ್ಪ, ಸರ್ಕಾರಿ ಅಭಿಯೋಜಕರು, ಹಾಸನ ಇವರ ವಿರುದ್ಧದ ಆರೋಪಗಳ ಬಗ್ಗೆ ಮಾಡಿರುವ ಇಲಾಖಾ ವಿಚಾರಣೆ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**

1. ಕಾರಣ ಕೇಳುವ ತಿಳುವಳಿಕೆ ಪತ್ರಗಳ ಸಂಖ್ಯೆ : ಒಇ 945 ಪಿಪಿಇ 2005 ದಿನಾಂಕ 17–09–2007.
2. ಎಂ. ಶ್ರೀ ನರಸಪ್ಪ ಇವರ ಸಮಜಾಯಿಷಿ ಪತ್ರ ದಿನಾಂಕ 16–10–2007.
3. ಸರ್ಕಾರಿ ಆದೇಶ ಸಂಖ್ಯೆ ಒಇ 945 ಪಿಪಿಇ 2005 ದಿನಾಂಕ 29–04–2008.
4. ವಿಚಾರಣಾಧಿಕಾರಿಯವರ ವಿಚಾರಣಾ ವರದಿ ದಿನಾಂಕ 25–07–2009.

**ಪ್ರಸ್ತಾವನೆ :**

ಶ್ರೀ ಎಂ. ನರಸಪ್ಪ, ಸರ್ಕಾರಿ ಅಭಿಯೋಜಕರು ಇವರು ಮಡಿಕೇರಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದಲ್ಲಿ ಸರ್ಕಾರಿ ಅಭಿಯೋಜಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಸದರಿ ನ್ಯಾಯಾಲಯದ ಎಸ್.ಸಿ. ಸಂಖ್ಯೆ 15/01ರ ಪ್ರಕರಣದ ವಿಚಾರಣೆ ನಡೆಸುವ ಸಂದರ್ಭದಲ್ಲಿ ಸದರಿ ಪ್ರಕರಣದ

ಪ್ರಮುಖ ಸಾಕ್ಷಿಯಾದ ಚಾ.ಸಾ. 9 ರವರನ್ನು ವಿಚಾರಣೆ ಮಾಡದೇ ಕರ್ತವ್ಯ ನಿರ್ಲಕ್ಷ್ಯ ತೋರಿಸಿದ್ದರೆಂಬ ಆರೋಪದ ಮೇಲೆ ಕ್ರಮಾಂಕ (1) ರಲ್ಲಿ ಓದಲಾಗಿರುವ ಕಾರಣ ಕೇಳುವ ತಿಳುವಳಿಕೆ ಪತ್ರವನ್ನು ದಿನಾಂಕ 17–9–2007 ರಂದು ಜಾರಿ ಮಾಡಲಾಗಿತ್ತು.

ಮೇಲೆ ಕ್ರಮಾಂಕ (2) ರಲ್ಲಿ ಓದಲಾಗಿರುವ ದಿನಾಂಕ 16–10–2007 ರಲ್ಲಿ ಆರೋಪಿತ ಸರ್ಕಾರಿ ಅಧಿಕಾರಿ ಶ್ರೀ ಎಂ. ನರಸಪ್ಪ ಇವರು ತಮ್ಮ ಲಿಖಿತ ಪ್ರತಿವಾದದ ಹೇಳಿಕೆಯಲ್ಲಿ ಅವರ ಮೇಲೆ ಮಾಡಿರುವ ಆರೋಪಗಳನ್ನು ಸ್ಪಷ್ಟವಾಗಿ ನಿರಾಕರಿಸಿದ್ದರು.

ಮೇಲೆ ಕ್ರಮಾಂಕ (3) ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ಸದರಿ ಆರೋಪಿತ ಸರ್ಕಾರಿ ಅಧಿಕಾರಿಯ ಮೇಲೆ ಮಾಡಲಾಗಿರುವ ಆರೋಪಗಳ ಸತ್ಯಾಸತ್ಯತೆಯ ಬಗ್ಗೆ ತಿಳಿಯಲು ಕರ್ನಾಟಕ ಸರ್ಕಾರ ಸೇವಾ ನಿಯಮ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11ರ ಉಪ ನಿಯಮ (2)ರನ್ವಯ ಮತ್ತು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆದೇಶ ಸಂಖ್ಯೆ ಸಿಆಸುಇ 3 ಸೇಇಎ 96 ದಿನಾಂಕ 24–4–98 ರನ್ವಯ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿಯನ್ನು ನೇಮಿಸಲಾಗಿತ್ತು.

ವಿಚಾರಣಾಧಿಕಾರಿಯವರು ಮೇಲೆ ಕ್ರಮಾಂಕ (4) ರಲ್ಲಿ ಓದಲಾಗಿರುವ ತಮ್ಮ ವರದಿಯಲ್ಲಿ ಆರೋಪಿತ ಅಧಿಕಾರಿಯ ಮೇಲೆ ಮಾಡಲಾದ ದೋಷಾರೋಪಣೆಗಳನ್ನು ಸಾಬೀತುಪಡಿಸುವಲ್ಲಿ ಶಿಸ್ತು ಪ್ರಾಧಿಕಾರವು ಅಸಮರ್ಥಗೊಂಡಿದೆ. ಆದ್ದರಿಂದ ಈ ಪ್ರಶ್ನೆಯನ್ನು ನಕಾರಾತ್ಮಕವೆಂದು ಉತ್ತರಿಸಿದ್ದೇನೆ ಎಂದು ನಿರ್ಣಯ ನೀಡಿದ್ದಾರೆ.

ವಿಚಾರಣಾ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ : ಒಇ 945 ಪಿಪಿಇ 2005, ಬೆಂಗಳೂರು, ದಿನಾಂಕ : 28–07–2010**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರವು ಶ್ರೀ ಎಂ. ನರಸಪ್ಪ, ಸರ್ಕಾರಿ ಅಭಿಯೋಜಕರು, ಹಾಸನ ಇವರನ್ನು ಕ್ರಮಾಂಕ : ಒಇ 945 ಪಿಪಿಇ 2005 ದಿನಾಂಕ 17–09–2007ರ ನೋಟೀಸಿನಲ್ಲಿ ಮಾಡಲಾದ ಆರೋಪಗಳಿಂದ ಈ ಮೂಲಕ ಆರೋಪ ಮುಕ್ತಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಕೆ.ಸಿ. ಸಿದ್ದಪ್ಪ),**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ.
(ಕಾ ಮತ್ತು ಸು ಕಾಫಿಪೋಸ ಮತ್ತು ಅಭಿಯೋಗ).

ಪಿ.ಆರ್. 1936

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಅರುಣಕುಮಾರ್ ಜಿ.ವಿ. ಪಿ.ಎಸ್.ಐ. ರವರ ಖಾಯಂಪೂರ್ವ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ 87/ಸಿಬ್ಬಂದಿ–1/2009–10, ದಿನಾಂಕ 27.11.2009 ಮತ್ತು 07.04.2010.

**ಪ್ರಸ್ತಾವನೆ :**

ಶ್ರೀ ಅರುಣಕುಮಾರ್ ಜಿ.ವಿ. ಇವರು ಪಿ.ಎಸ್.ಐ. ಹುದ್ದೆಗೆ ದಿನಾಂಕ 01–09–2005 ರಂದು ನೇಮಕಾತಿ ಹೊಂದಿರುತ್ತಾರೆ. ಇವರ 2½ ವರ್ಷಗಳ ಪ್ರೊಬೇಷನರಿ ಅವಧಿಯು ದಿನಾಂಕ 01–03–2008 ರಂದು ಪೂರ್ಣಗೊಳ್ಳುತ್ತದೆ. ಇವರು ಇಲಾಖಾ ಪರೀಕ್ಷೆಯಾದ ಅಕೌಂಟ್ಸ್ ಹೈಯರ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುತ್ತಾರೆ. ಆದರೆ, ಈ ಅವಧಿಯಲ್ಲಿ ಇವರ ಸೇವೆಯು ತೃಪ್ತಿಕರವಾಗಿರದೆ ಇದ್ದುದರಿಂದ, ಐಜಿಪಿ ಉತ್ತರ ವಲಯ, ಬೆಳಗಾವಿ ರವರು ದಿನಾಂಕ 18–07–2009ರ ಆದೇಶದಲ್ಲಿ ಇವರ ಖಾಯಂ ಪೂರ್ವ ಅವಧಿಯನ್ನು ಕೆ.ಸಿ.ಎಸ್. (ಪ್ರೊಬೇಷನ್) ನಿಯಮ 1977ರ ನಿಯಮಾವಳಿ 4(1) (i) ರನ್ವಯ ಒಂದು ವರ್ಷ ಮೂರು ತಿಂಗಳ ಅವಧಿಗೆ ದಿನಾಂಕ 01–03–2008 ರಿಂದ 01–06–2009ರವರೆಗೆ ವಿಸ್ತರಿಸಿರುತ್ತಾರೆ.

ಸದರಿ ಅಧಿಕಾರಿಯವರು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 4 ಮತ್ತು 5(1) ರನ್ವಯ ಹೊಂದಿರುವ ಹುದ್ದೆಯ ಕಾರ್ಯಭಾರವನ್ನು ನಿರ್ವಹಿಸಲು ಸಮರ್ಥರಿರುವುದಾಗಿ ಹಾಗೂ ಇವರ ಖಾಯಂ ಪೂರ್ವ ಅವಧಿಯನ್ನು ದಿನಾಂಕ 02–06–2009 ರಿಂದ 01–12–2009ರ ವರೆಗೆ ವಿಸ್ತರಿಸುವಂತೆ ಡಿಜಿ ಮತ್ತು ಐಜಿಪಿ ರವರು ಮೇಲೆ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ : ಒಇ 12 ಪೊಸಇ 2010, ಬೆಂಗಳೂರು, ದಿನಾಂಕ : 24–07–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನರಿ) ನಿಯಮಾವಳಿಗಳು, 1977ರ ನಿಯಮ 4(1) (i) ರನ್ವಯ ಶ್ರೀ ಅರುಣಕುಮಾರ್ ಜಿ.ವಿ. ಪಿ.ಎಸ್.ಐ. ಇವರ ಖಾಯಂ ಪೂರ್ವ ಅವಧಿಯನ್ನು ದಿನಾಂಕ 02–06–2009 ರಿಂದ 01–12–2009ರ ವರೆಗೆ ವಿಸ್ತರಿಸಿ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಟಿ.ಎನ್. ರವಿಪ್ರಕಾಶ್),**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು).

ಪಿ.ಆರ್. 1937

## HEALTH AND FAMILY WELFARE SECRETARIAT

**Sub :-** Continuation of consultancy services of Dr. K.N. Shivalli – reg.

**Read :-**
1. Government Order No. HFW/KHSDRP/Sect/Cons-3/2008-09, Bangalore, Dated 28-05-2008.
2. Proceedings of the 20th meeting of Programme Steering Committee, Dated : 17th and 22nd June 2010.

***

**Preamble:**

In the Government Order read at (1) above, Dr. K.N. Shivalli was appointed as Consultant for PHCF/PPP activities under KHSDRP. This period of consultancy was initially for a period of 2 years from 28-05-2008 to 27-05-2010 with a remuneration of Rs. 40,000/- per month inclusive of local transport, computer services and communication facilities. His consultancy period has ended on 27-05-2010.

The programme Steering Committee (PSC) in its 20th meeting held on 17th and 22nd June 2010, approved to continue the services of Dr. K.N. Shivalli as PHCF/PPP Consultant till the end of project period i.e., upto 31-03-2012 and to enhance his monthly remuneration from Rs.40000/- to Rs. 50,000/- inclusive of local transport, computer services and communication facilities, on the existing terms and conditions.

Hence the following Order :

**Government Order No. HFW/KHSDRP/Sect/Cons-3/2008-09, Bangalore, dated : 28-07-2010**

Under the circumstances mentioned in the preamble, Government are pleased to continue the services of Dr. K.N. Shivalli as PHCF/PPP Consultant under KHSDRP with an enhanced monthly remuneration of Rs. 50,000/- (Rupees fifty thousand only) per month inclusive of local transport, computer services and communication facilities till the end of the project period i.e., up to 31st March 2012 with the existing terms and conditions.

The expenditure in this behalf shall be debited under the Head of Account "2210-06-800-0-84-051 (General Expenses)" under the Project Management and evaluation for the corresponding financial year.

By Order and in the name of the Governor of Karnataka

**(M. SHASHIDHAR),**

Deputy Secretary to Government,

(KHSDRP)

Health and Family Welfare Department.

P.R. 1938

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಜೀತವಿಮುಕ್ತರ ಪುನರ್ವಸತಿ ಸಹಾಯಧನ ಯೋಜನೆಯಡಿ ಗದಗ್ ಜಿಲ್ಲೆಯ ಏಳು ಜನ ಜೀತವಿಮುಕ್ತರಿಗೆ 2010–11 ನೇ ಸಾಲಿನಲ್ಲಿ ಪೂರ್ಣ ಸಹಾಯಧನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂ.ಗ್ರಾಅಪ. 15 ಆರ್‌ಬಿಎಲ್. 2004 ದಿನಾಂಕ 21–01–2006.
2. ಉಪವಿಭಾಗಾಧಿಕಾರಿ ಗದಗ್ ಉಪ ವಿಭಾಗ, ಗದಗ್ ಇವರ ಪತ್ರ ಸಂಖ್ಯೆ ಆಡಳಿತ ವಹಿ 01/10–11/32, ದಿನಾಂಕ 03–04–2010.
3. ಗದಗ್ ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯ ಪತ್ರ ಸಂ. ಜಿಪಂಗ: ಸಿ3 : ಇತರೆ 2010–11, ದಿನಾಂಕ 19–05–2010.
4. ಸರ್ಕಾರದ ಆದೇಶ ಸಂ. ಗ್ರಾಅಪ. 01 ಆರ್‌ಬಿಎಲ್. 2010, ದಿನಾಂಕ 14–06–2010.
5. ಗದಗ್ ಜಿ.ಪಂ. ಮು.ಕಾ.ನಿ. ಅಧಿಕಾರಿ ಇವರ ಪತ್ರ ಸಂ : ಜಿಲ್ಲಾ ಪಂಚಾಯತಿ ಗದಗ ಆಡಳಿತ ಏಡಿ 2010–11/1095, ದಿನಾಂಕ 25–06–2010.

**ಪ್ರಸ್ತಾವನೆ :**

ಜೀತಕಾರ್ಮಿಕರನ್ನು ಜೀತಪದ್ಧತಿಯಿಂದ ಬಿಡುಗಡೆಗೊಳಿಸಿದ ನಂತರ, ಅವರುಗಳಿಗೆ ಕನಿಷ್ಠ ಆರ್ಥಿಕ ಸವಲತ್ತನ್ನು ಒದಗಿಸುವ ಉದ್ದೇಶದಿಂದ ರಾಜ್ಯ ಸರ್ಕಾರವು ಜೀತವಿಮುಕ್ತರ ಪುನರ್ವಸತಿ ಸಹಾಯಧನ ಎಂಬ ಹೊಸ ಯೋಜನೆಯನ್ನು ರೂಪಿಸಿದ್ದು, ದಿನಾಂಕ 21–01–2006 ರಿಂದ ಈ ಯೋಜನೆಯನ್ನು ರಾಜ್ಯಾದ್ಯಂತ ಜಾರಿಗೆ ತರಲಾಗಿದೆ. ಈ ಯೋಜನೆಯಡಿ ರೂಪಿಸಿರುವ ನಿರ್ದೇಶನದಂತೆ, ದಿನಾಂಕ 21–01–2006ರ ತರುವಾಯ ಜೀತಪದ್ಧತಿಯಿಂದ ಬಿಡುಗಡೆಗೊಳಿಸುವ ರಾಜ್ಯದ ಪ್ರತಿ ಜೀತ ಕಾರ್ಮಿಕ/ಬಾಲ ಜೀತ ಕಾರ್ಮಿಕರಿಗೆ ಮಾಹೆಯಾನ ರೂ.300.00 ರಂತೆ ಸಹಾಯಧನವನ್ನು **ಜೀತಪದ್ಧತಿಯಿಂದ ಬಿಡುಗಡೆಗೊಳಿಸಿದ ದಿನದಿಂದ ಮೊದಲ 24 ತಿಂಗಳುಗಳ ಅವಧಿಗೆ ಪಾವತಿಸಬೇಕಾಗುತ್ತದೆ.**

ಮೇಲೆ ಓದಲಾದ ಕ್ರ.ಸಂ. (2)ರ ಪತ್ರದಲ್ಲಿ ಗದಗ್ ಜಿಲ್ಲೆಯ, ರೋಣ ತಾಲ್ಲೂಕಿನ ಏಳು ಜನ ಜೀತವಿಮುಕ್ತರು ಬೆಂಗಳೂರು(ನಗರ) ಜಿಲ್ಲೆಯ ಆನೇಕಲ್ ತಾಲ್ಲೂಕು, ಕಸಬ ಹೋಬಳಿ, ಮುತ್ತುಗಟ್ಟಿ ಗ್ರಾಮದಲ್ಲಿನ ಎಸ್.ಬಿ.ಐ. ಇಟ್ಟಿಗೆ ಕಾರ್ಖಾನೆಯ ಮಾಲೀಕರಾದ ಶ್ರೀ ಶಶಿಕುಮಾರ್ ಬಿನ್ ವೆಂಕಟಸ್ವಾಮಿ ರೆಡ್ಡಿ ಇವರಡಿ ಒತ್ತೆಯಾಳುಗಳಾಗಿರುವುದನ್ನು ಪತ್ತೆ ಹಚ್ಚಿ, ಜೀತದಾಳು ವಿಮೋಚನಾ ಕಾಯಿದೆ 1976ರಡಿ ತಪ್ಪಿತಸ್ಥರ ವಿರುದ್ಧ ಪ್ರಕರಣ ದಾಖಲಿಸಿಕೊಂಡು, ದಿ:25–06–08 ರಂದು ಜೀತಪದ್ಧತಿಯಿಂದ ವಿಮುಕ್ತಿಗೊಳಿಸಿ, ಬೆಂಗಳೂರು ದಕ್ಷಿಣ ಉಪ ವಿಭಾಗದ ಉಪ ವಿಭಾಗೀಯ ದಂಡಾಧಿಕಾರಿರವರು ಜೀತವಿಮುಕ್ತ ಪ್ರಮಾಣಪತ್ರವನ್ನು ಹೊರಡಿಸಿರುವುದರಿಂದ, ಸದರಿಯವರಿಗೆ ಜೂನ್ 2008 ರಿಂದ 24 ತಿಂಗಳುಗಳವರೆಗೆ

ರೂ.300/–ಗಳ ಮಾಶಾಸನ ಮಂಜೂರು ಮಾಡಲು ಉಲ್ಲೇಖ(3)ರ ಪತ್ರದಲ್ಲಿ ಸರ್ಕಾರಕ್ಕೆ 2010–11ನೇ ಸಾಲಿನಲ್ಲಿ ವರದಿ ಮಾಡಿರುತ್ತಾರೆ. ಈ ಹಿನ್ನೆಲೆಯಲ್ಲಿ, ಸದರಿ ಏಳು ಜನ ಜೀತವಿಮುಕ್ತರಿಗೆ, 2010–11ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2230–01–198–6–01–300 ಅಡಿಯಲ್ಲಿ ಲಭ್ಯವಿದ್ದ ಅನುದಾನದಲ್ಲಿ (2010 ಏಪ್ರಿಲ್ ಮಾಹೆಯಿಂದ 2010 ಮಾರ್ಚ್ ಮಾಹೆಯವರೆಗೆ) ಕೇವಲ 12 ತಿಂಗಳ ಅವಧಿಗೆ ಮಾಹೆಯಾನ ರೂ.300/– ರಂತೆ ಸಹಾಯಧನಕ್ಕಾಗಿ ತಗಲುವ ರೂ.25,200/–ಗಳ ಅನುದಾನವನ್ನು ಮಾತ್ರ ಗದಗ್ ಜಿಲ್ಲಾ ಪಂಚಾಯಿತಿಗೆ ಉಲ್ಲೇಖ (4)ರ ಆದೇಶದಲ್ಲಿ ಬಿಡುಗಡೆಗೊಳಿಸಲು ಕ್ರಮ ಕೈಗೊಳ್ಳಲಾಗಿದ್ದು, ಮಿಕ್ಕ 12 ತಿಂಗಳ ಬಾಕಿಯನ್ನು ಮುಂದಿನ ಸಾಲಿನಲ್ಲಿ ಬಿಡುಗಡೆಗೊಳಿಸಲಾಗುವುದೆಂದು ತಿಳಿಸಲಾಗಿತ್ತು. ಪ್ರಸ್ತುತ, ಉಲ್ಲೇಖ (5)ರ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಸದರಿ 7 ಜನ ಜೀತವಿಮುಕ್ತರಿಗೆ, ಪೂರ್ಣ ಮಾಶಾಸನ ಮಂಜೂರು ಮಾಡಲು ವಿನಂತಿಸಿರುತ್ತಾರೆ. ಆದ್ದರಿಂದ ಸದರಿ 7 ಜನ ಜೀತವಿಮುಕ್ತರಿಗೆ ದೊರಕಬೇಕಾದ ಬಾಕಿ **ರೂ.25,200/– ಗಳನ್ನು ಕೂಡ 2010–11ನೇ ಸಾಲಿನಲ್ಲಿಯೇ ಬಿಡುಗಡೆಗೊಳಿಸಲು ಸರ್ಕಾರವು ತೀರ್ಮಾನಿಸಿದೆ.** ಆದ್ದರಿಂದ, ಈ ಹಿಂದೆ ಹೊರಡಿಸಲಾದ ಸರ್ಕಾರದ ದಿನಾಂಕ 14–06–2010ರ ಸಮಸಂಖ್ಯೆಯ ಆದೇಶವನ್ನು ಮುಂದುವರೆಸುತ್ತಾ ಈ ಆದೇಶ.

**ಸರ್ಕಾರದ ಆದೇಶ ಸಂ : ಗ್ರಾಅಪ 1 ಆರ್‌ಬಿಎಲ್ 2010, ಬೆಂಗಳೂರು, ದಿನಾಂಕ : 19–07–2010**

ಜೀತವಿಮುಕ್ತರ ಪುನರ್ವಸತಿ ಸಹಾಯಧನ ಯೋಜನೆ ಅಡಿ ಗದಗ್ ಜಿಲ್ಲೆಯ ರೋಣ ತಾಲ್ಲೂಕಿನ ಏಳು ಜನ ಜೀತವಿಮುಕ್ತರಿಗೆ ಬಾಕಿ 12 ತಿಂಗಳ ಅವಧಿಗೆ ತಗಲುವ ಮಾಹೆಯಾನ ರೂ.300.00 ರಂತೆ ಸಹಾಯಧನ ಪಾವತಿಸಲು ಒಟ್ಟು ರೂ.25,200.00 (ಇಪ್ಪತ್ತೈದು ಸಾವಿರದ ಇನ್ನೂರು ರೂಪಾಯಿಗಳು ಮಾತ್ರ)ಗಳನ್ನು 2010–11ನೇ ಸಾಲಿನಲ್ಲಿಯೇ ಗದಗ್ ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

2. ಈ ಕಾರ್ಯಕ್ಕಾಗಿ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2230–ಕಾರ್ಮಿಕ ಮತ್ತು ಉದ್ಯೋಗ –01–ಕಾರ್ಮಿಕ–198–ಗ್ರಾಮ ಪಂಚಾಯಿತಿಗಳಿಗೆ ಸಹಾಯ 6–ಗ್ರಾಮ ಪಂಚಾಯಿತಿಗಳು–ಕೇಂದ್ರ ಪುರಸ್ಕೃತ ಯೋಜನೆ (ಜೀತದಾಳುಗಳ ಪುನರ್ವಸತಿ)–01–ಬ್ಲಾಕ್ ಅನುದಾನ–300–ಒಟ್ಟು ಜಿಲ್ಲಾ ಪಂಚಾಯಿತಿ (ಯೋಜನೆ)ಗೆ ಜಮಾ ಮಾಡತಕ್ಕದ್ದು.

3. ಸರ್ಕಾರದ ಆದೇಶ ಸಂ. ಗ್ರಾಅಪ. 15. ಆರ್‌ಬಿಎಲ್.2004 ದಿನಾಂಕ 21–01–2006 ರಲ್ಲಿನ ಎಲ್ಲಾ ಮಾರ್ಗಸೂಚಿಗಳನ್ನು ತಪ್ಪದೇ ಪಾಲಿಸತಕ್ಕದ್ದು.

4. ಈ ಆದೇಶವನ್ನು ಇಲಾಖಾ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿ ಸಂ.ಗ್ರಾಅಪ 152 ಪಿಬಿಎಸ್ 2010 ದಿನಾಂಕ 17–07–2010 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎನ್.ಎಸ್. ಪ್ರಸನ್ನಕುಮಾರ್),**
ನಿರ್ದೇಶಕರು,
ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ
ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ,

ಪಿ.ಆರ್. 1939

## COMMERCE & INDUSTRIES SECRETARIAT

**Sub :-** Approval to the Project Proposal of M/s. Rajesh Exports Ltd., to establish a "Gems & Jewellary Park" at various Sy No.'s and Villages of Devanahalli Taluk, Bangalore Rural District.

**Read :-** Proceedings of the 23rd State High Level Clearance Committee (SHLCC) meeting held on 19-06-2010.

***

**Preamble:**

M/s. Rajesh Exports Ltd., proposes to establish a "Gems & Jewellary Park" at various Sy No.'s and Villages of Devanahalli Taluk, Bangalore Rural District, with an investment of Rs.500 crores, generating employment to about 20000 persons.

In the 23rd State High Level Clearance Committee (SHLCC) meeting held on 19-06-2010 the proposal of the Company was discussed and approved.

Government has examined the recommendations made by the State High Level Clearance Committee in its 23rd meeting held on 19-06-2010 in all aspects.

Hence the following Order.

**Government Order No. CI 283 SPI 2010, Bangalore, dated : 13-07-2010**

Government is pleased to accord in principle approval to the project proposal of M/s. Rajesh Exports Ltd., proposes to establish a "Gems & Jewellary Park" at various Sy No.'s and Villages of Devanahalli Taluk, Bangalore Rural District, with an investment of Rs.500 crores, generating employment to about 20000 persons and extend the following infrastructure facilities, incentives and concessions.

**Infrastructure Facilities** :

1. **Land :** 100 acres of land at various Sy No's of Byrappanahalli, Attibele, Byadarahalli, Meesaganahalli, Malligenahalli, Gundlahalli, Sannappanahalli villages, Devanahalli Taluk, Bangalore Rural District to be purchased U/s 109 of KLR Act and conversion of the same for industrial use or KIADB to acquire and allot as SUC with consent of land owners.

2. **Water :** 2 Million LPD from Local body/KIADB subject to availability.
3. **Power :** 125000 KVA to be serviced by BESCOM.
4. **Incentives and Concessions :** As per prevailing Industrial Policy of the State.

**GENERAL TERMS AND CONDITIONS** :

1. **Environment :** The promoters to obtain CFE and CFO from KSPCB and environmental clearance from MOEF, GOI.
2. **Employment :** The Company shall prepare a plan for development of Human Resources required for the project, train local people and provide employment to these trained local youth and comply with the provisions of Industrial Policy of Govt. of Karnataka. A copy of Human Resources Development plan shall be sent to the Commissioner for I.D. & Director of Industries and Commerce for monitoring.
3. **Vendor Development :** Wherever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.
4. **Social Infrastructure Development :** The Company is advised to take up social infrastructure development projects in the vicinity of the proposed location of the unit. A copy of such projects shall be sent to the Commissioner for I.D. & Director of Industries and Commerce for monitoring.
5. **Others :**
   a) The project proponents shall provide employment to at least one member of the family of each land looser as the land is being acquired through KIADB.
   b) The project proponents shall adopt rain water harvesting, waste water recycling and water conservation techniques. Zero discharge facility should be adopted wherever applicable.
   c) The promoters shall take all statutory and other necessary clearances from the competent authorities including GOI and shall submit milestones/progress in implementation of the project regularly, which will be monitored by the Department.

This approval is valid for a period of two years from the date of issue.

By Order and in the name of the Governor of Karnataka

(**Aparna Pavate)**

Desk Officer (Technical Cell)

Commerce & Industries Department.

P.R. 1940

## COMMERCE AND INDUSTRIES SECRETARIAT

Sub: Approval to the Project Proposal of M/s. Vish Wind Infrastructure Ltd., to establish a "275 MW Wind Power Plant" in Bidar, Bellary, Yadgiri, Chitradurga, Tumkur, Chikamagalur, Bijapur and Bagalkot District.

Read: Proceedings of the 23rd State High Level Clearance Committee (SHLCC) Meeting held on 19-06-2010.

**Preamble:**

M/s. Vish Wind Infrastructure Ltd., proposes to establish a "275 MW Wind Power Plant" in Bidar, Bellary, Yadgiri, Chitradurga, Tumkur, Chikamagalur, Bijapur and Bagalkot District, with an investment of Rs. 1283 Crores, generating employment to about 785 persons.

In the 23rd State High Level Clearance Committee (SHLCC) Meeting held on 19-06-2010, the proposal of the Company was discussed and approved.

Government has examined the recommendations made by the State High Level Clearance Committee in the 23rd Meeting held on 19-06-2010, in all aspects.

Hence the following order.

**Government Order No.: CI 303 SPI 2010, Bangalore Dated: 14-07-2010**

Government is pleased to accord in principle approval to the project proposal of M/s. Vish Wind Infrastructure Ltd., to establish a "275 MW Wind Power Plant" in Bidar Bellary, Yadgiri, Chitradurga, Tumkur, Chikamagalur, Bijapur and Bagalkot District, with an investment of Rs. 1283 Crores generating employment to about 785 persons and extend the following infrastructure facilities, incentives and concessions.

**INFRASTRUCTURE FACILITIES:**

1. **Land:** 900 acres - in Bidar, Bellary, Yadgiri, Chitradurga, Tumkur, Chikamagalur, Bijapur and Bagalkot Districts to be purchased U/s 109 of KLR Act and conversion of the same for industrial use OR KIADB to aquire and allot as SUC.
2. **Water:** Not required.
3. **Power:** Required power during the construction phase to be serviced by respective ESCOMS.
4. **Incentives and Concessions:** As per prevailing Renewable Energy Policy of the State.

## ಶಿಕ್ಷಣ ಸಚಿವಾಲಯ

### ಸೇರ್ಪಡೆ ಆದೇಶ

ಸಂಖ್ಯೆ: ಇಡಿ 378 ಎಂಸಿಡಿ 2009, ಭಾಗ–1 ಬೆಂಗಳೂರು ದಿನಾಂಕ : 30–07–2010

**ವಿಷಯ** : ಕೇಂದ್ರ ಪುರಸ್ಕೃತ ಯೋಜನೆಯಾದ ಸಾಕ್ಷರ ಭಾರತ್ ಕಾರ್ಯಕ್ರಮವನ್ನು ರಾಜ್ಯದಲ್ಲಿ ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ಸಲುವಾಗಿ ವಿವಿಧ ಹಂತಗಳಲ್ಲಿ ಸಮಿತಿಗಳನ್ನು ರಚಿಸಿ ಅವುಗಳಿಗೆ ನಿರ್ದಿಷ್ಟ ಜವಾಬ್ದಾರಿಗಳನ್ನು ವಹಿಸಿಕೊಡುವ ಬಗ್ಗೆ.

**ಉಲ್ಲೇಖ** : ಸರ್ಕಾರದ ಆದೇಶ ಸಂಖ್ಯೆ: ಇಡಿ 378 ಎಂಸಿಡಿ 2009 ಭಾಗ–1, ದಿನಾಂಕ : 12–03–2010

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖ ಸರ್ಕಾರಿ ಆದೇಶದ ಅನುಬಂಧ–2ರ ಜಿಲ್ಲಾ ಮಟ್ಟದ ಲೋಕ ಶಿಕ್ಷಣ ಸಮಿತಿಯಲ್ಲಿ ಪದವಿ ಪೂರ್ವ ಶಿಕ್ಷಣ ಇಲಾಖೆಯ ಜಿಲ್ಲಾ ಉಪ ನಿರ್ದೇಶಕರನ್ನು ಸದಸ್ಯರನ್ನಾಗಿ ಸೇರ್ಪಡೆ ಮಾಡಿ ಓದಿಕೊಳ್ಳತಕ್ಕದ್ದು.

ಹಾಗೂ ಅನುಬಂಧ 3ರಲ್ಲಿ ತಾಲ್ಲೂಕು ಮಟ್ಟದ ಲೋಕ ಶಿಕ್ಷಣ ಸಮಿತಿಯಲ್ಲಿ ತಹಸೀಲ್ದಾರ ರವರು ಸದಸ್ಯರು ಎಂಬುವರ ಬದಲಾಗಿ ಉಪಾಧ್ಯಕ್ಷರು ಎಂದು ಸೇರ್ಪಡೆ ಮಾಡಿ ಓದಿಕೊಳ್ಳತಕ್ಕದ್ದು.

ಉಳಿದ ಅಂಶಗಳು ಯಥಾವತ್ತಾಗಿ ಮುಂದುವರಿಯುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2103

**ಐ.ಎಫ್.ಮಾಗಿ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ, (ಯೋಜನೆ)

## ಸಹಕಾರ ಸಚಿವಾಲಯ

**ವಿಷಯ** : ದಿ ಮಾರ್ಕಂಡೇಯ ಸಹಕಾರಿ ಕಾರ್ಖಾನೆ ನಿ., ಕಾಕತಿ, ಬೆಳಗಾವಿ ಜಿಲ್ಲೆ ಇದರ 2008–09 ಹಾಗೂ 2009–10ನೇ ಸಾಲುಗಳ ವಾರ್ಷಿಕ ಸಾಮಾನ್ಯ ಸಭೆಯನ್ನು ಜರುಗಿಸಲು ಕಾಲಾವಕಾಶ ನೀಡುವ ಕುರಿತು.

**ಓದಲಾಗಿದೆ** :

1) ಸರ್ಕಾರದ ಆದೇಶ ಸಂಖ್ಯೆ: ಸ ಇ 04 ಸಸಕಾ 2010 ಬೆಂಗಳೂರು, ದಿನಾಂಕ: 07–05–2010
2) ಅಧ್ಯಕ್ಷರು, ದಿ ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಕಾಕತಿ, ಬೆಳಗಾವಿ ಜಿಲ್ಲೆ ಇವರ ಪತ್ರ ಸಂಖ್ಯೆ: ವಾಮ.ಸಭೆ/2010–11/43 ದಿನಾಂಕ:15–07–2010

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ರ ಕಲಂ 121 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ದಿ ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಕಾಕತಿ, ಬೆಳಗಾವಿ ಜಿಲ್ಲೆ ಇದರ 2008–09 ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ದಿನಾಂಕ: 30/09/2010 ರೊಳಗೆ ನಡೆಸಲು ಕಾಲಾವಕಾಶವನ್ನು ವಿಸ್ತರಿಸಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 27(1) ರ ಉಪ ಬಂಧಗಳನ್ನು ಮಾರ್ಪಡಿಸಿ ಅನುಮತಿ ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ದಿ ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಕಾಕತಿ, ಬೆಳಗಾವಿ ಜಿಲ್ಲೆ ಇದರ ಅಧ್ಯಕ್ಷರು ದಿನಾಂಕ: 03/03/2010ರ ಪತ್ರದಲ್ಲಿ ಸದರಿ ಕಾರ್ಖಾನೆಗೆ ಅವಶ್ಯಕವಾಗಿರುವ ಅವಧಿ ಸಾಲ ರೂ.22.43 ಕೋಟಿಗಳ ವ್ಯವಸ್ಥೆ ಬಗ್ಗೆ ಎನ್.ಸಿ.ಡಿ.ಸಿ., ನವದೆಹಲಿರವರಿಗೆ ಬೇಡಿಕೆ ಸಲ್ಲಿಸಿದ್ದು, ಅವರಿಂದ ಹಾಗೂ ಸರ್ಕಾರ ಹಾಕಿರುವ ನಿಬಂಧನೆ ಪ್ರಕಾರ, ಕಾರ್ಖಾನೆಯು ರೂ.8.49 ಕೋಟಿಗಳಷ್ಟು ಹೆಚ್ಚಿನ ಪಾಲು ಬಂಡವಾಳವನ್ನು ಸಂಗ್ರಹಿಸಬೇಕಾಗಿರುವುದರಿಂದ, ಹೆಚ್ಚಿನ ಪಾಲು ಬಂಡವಾಳವನ್ನು ಕ್ರೋಢೀಕರಿಸುವಲ್ಲಿ ಆಡಳಿತ ಮಂಡಳಿಯವರು ಹಾಗೂ ಸಿಬ್ಬಂದಿ ವರ್ಗದವರು ಕಾರ್ಯ ಮಗ್ನರಾಗಿರುವುದರಿಂದ, ಇಂಥಹ ಪರಿಸ್ಥಿತಿಯಲ್ಲಿ 2008–09 ಹಾಗೂ 2009–2010 ನೇ ಸಾಲುಗಳ ಮಹಾ ಸಭೆಯನ್ನು ಜರುಗಿಸುವುದು ತುಂಬಾ ಕಠಿಣವಾಗುವುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಸರ್ಕಾರಿ ಆದೇಶದಲ್ಲಿ ದಿ ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಕಾಕತಿ, ಬೆಳಗಾವಿ ಜಿಲ್ಲೆ ಇದರ 2008–09 ನೇ ಸಾಲಿನ ವಾರ್ಷಿಕ ಮಹಾ ಸಭೆಯನ್ನು ದಿನಾಂಕ:30–09–2010ರ ಒಳಗೆ ಜರುಗಿಸಲು ಅನುಮತಿಸಿರುವ ಬದಲು 2008–09ನೇ ಸಾಲಿನ ವಾಷಿಕ ಮಹಾ ಸಭೆಯನ್ನು ಹಾಗೂ 2009–2010ನೇ ಸಾಲುಗಳ ಮಹಾ ಸಭೆಯನ್ನು ದಿನಾಂಕ: 31–03–2011ರ ಒಳಗೆ ಜರುಗಿಸಲು ಅನುಮತಿ ನೀಡುವಂತೆ ಕೋರಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸ ಇ 14 ಸಸಕಾ 2010 ಬೆಂಗಳೂರು, ದಿನಾಂಕ 4ನೇ ಆಗಸ್ಟ್ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ರ ಕಲಂ 121 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ದಿ ಮಾರ್ಕಂಡೇಯ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಕಾಕತಿ,ಬೆಳಗಾವಿ ಇದರ 2008–09 ಹಾಗೂ 2009–2010ನೇ ಸಾಲುಗಳ ವಾರ್ಷಿಕ ಮಹಾ ಸಭೆಯನ್ನು ದಿನಾಂಕ: 31–03–2011ರೊಳಗೆ ನಡೆಸಲು ಕಾಲಾವಕಾಶವನ್ನು ವಿಸ್ತರಿಸಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ರ ಕಲಂ 27(1) ರ ಉಪ ಬಂಧಗಳನ್ನು ಮಾರ್ಪಡಿಸಿ ಅನುಮತಿ ನೀಡಲಾಗಿದೆ.

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ27(1) ರ ಉಪಬಂಧಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 31–03–2011ರ ವರಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1) ರ ಕಲಂನ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. ನಂ 2104

**ಆರ್.ಎಸ್.ನೂಲಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ

ಸಹಕಾರ ಇಲಾಖೆ

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ** : ಸಮಾಜ ಕಲ್ಯಾಣ ಇಲಾಖೆಯಡಿಯಲ್ಲಿ ಬರುವ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳ ಇಲಾಖೆಯಲ್ಲಿರುವ ವಸತಿ ನಿಲಯಗಳು, ಆಶ್ರಮ ಶಾಲೆಗಳು, ಮೊರಾರ್ಜಿ ದೇಸಾಯಿ ಹಾಗೂ ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆಗಳ ವಿದ್ಯಾರ್ಥಿಗಳಿಗೆ ಸಮವಸ್ತ್ರ ಸರಬರಾಜು ಮಾಡುವ ಬಗ್ಗೆ.

**ಪ್ರಸ್ತಾವನೆ:**

ಸಮಾಜ ಕಲ್ಯಾಣ ಇಲಾಖೆ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ, ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ, ಇವುಗಳ ಅಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ವಸತಿ ನಿಲಯಗಳು, ಆಶ್ರಮ/ವಸತಿ ಶಾಲೆಗಳು, ಮೊರಾರ್ಜಿ ದೇಸಾಯಿ ಹಾಗೂ ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆ–ಇವುಗಳಲ್ಲಿರುವ ವಿದ್ಯಾರ್ಥಿ/ವಿದ್ಯಾರ್ಥಿನಿಯರಿಗೆ ಸಮವಸ್ತ್ರ ಸರಬರಾಜು ಬಗ್ಗೆ ದಿನಾಂಕ 31–05–2010ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಚರ್ಚಿಸಲಾಗಿದೆ. ಇಲಾಖಾ ಮುಖ್ಯಸ್ಥರು ಹಾಲಿ ಇರುವ ಪದ್ಧತಿಯನ್ನು ವಿವರಿಸಿ, ವಿದ್ಯಾರ್ಥಿಗಳಿಗೆ ಸರಬರಾಜು ಮಾಡುತ್ತಿರುವ ಬಟ್ಟೆಯ ಗುಣಮಟ್ಟ ಉತ್ತಮವಾಗಿಲ್ಲ ಎಂದು ತಿಳಿಸಿದರು. ಆದರಿಂದ ಉತ್ತಮ ಗುಣಮಟ್ಟದ ಬಟ್ಟೆಗಳನ್ನು ವಿದ್ಯಾರ್ಥಿಗಳಿಗೆ ಒದಗಿಸಲು ಶಿಕ್ಷಣ ಇಲಾಖೆಯ ಮಾದರಿಯಲ್ಲಿಯೇ ಬಟ್ಟೆಯನ್ನು ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮದಿಂದ ಖರೀದಿಸಿ ಸ್ಥಳೀಯವಾಗಿ ಸಮವಸ್ತ್ರಗಳನ್ನು ಹೊಲಿಸಿ, ವಸತಿ ನಿಲಯಗಳ ವಿದ್ಯಾರ್ಥಿಗಳಿಗೆ ಸರಬರಾಜು ಮಾಡಲು ಸಲಹೆ ಮಾಡಿದರು. (ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ ಕಲಂ 4 ಹೆಚ್ ರಲ್ಲಿ ಕೆ.ಹೆಚ್.ಡಿ.ಸಿ.ಗೆ ವಿನಾಯಿತಿ ಇರುತ್ತದೆ.) ಅದರಂತೆ ಎಲ್ಲಾ ವಿಷಯಗಳನ್ನು ಚರ್ಚಿಸಿ ಶಿಕ್ಷಣ ಇಲಾಖೆಯ ಮಾದರಿಯಲ್ಲಿಯೇ ಬಟ್ಟೆಯನ್ನು ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮದಿಂದ ಖರೀದಿಸಿ ಸ್ಥಳೀಯವಾಗಿ ಸಮವಸ್ತ್ರಗಳನ್ನು ಹೊಲಿಸಿ, ವಸತಿ ನಿಲಯಗಳ ವಿದ್ಯಾಥಿಗಳಿಗೆ ಸರಬರಾಜು ಮಾಡಲು ನಿರ್ಧರಿಸಲಾಗಿದೆ. ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದವರು ಸಲ್ಲಿಸಿದ ಮಾದರಿ ಬಟ್ಟೆಗಳನ್ನು ಪರಿಶೀಲಿಸಿ ಆಯ್ಕೆ ಮಾಡಲಾಗಿದೆ. ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮದ ಮಾರ್ಕೆಟಿಂಗ್ ಅಧಿಕಾರಿಗಳು ಹಾಜರಿದ್ದು ಅವರೊಂದಿಗೆ ದರದ ಬಗ್ಗೆ ಕೂಡ ಚರ್ಚಿಸಲಾಗಿದೆ. ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮದಿಂದ ಒದಗಿಸಿದ್ದ ಸ್ಯಾಂಪಲ್ ಬಟ್ಟೆಯ ಗುಣಮಟ್ಟ ಹಾಗೂ ದರಗಳನ್ನು ಅನುಬಂಧ–1 ರಲ್ಲಿ ನೀಡಿದಂತೆ ಸರಬರಾಜು ಮಾಡಲು ಕೆ.ಹೆಚ್.ಡಿ.ಸಿ ಅಧಿಕಾರಿಗಳು ಒಪ್ಪಿರುತ್ತಾರೆ.

ಮೇಲೆ ವಿವರಿಸಿದ ಹಿನ್ನೆಲೆಯಲ್ಲಿ ಸರ್ಕಾರದಿಂದ ಈ ಕೆಳಕಂಡ ಆದೇಶ ನೀಡಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 71 ಎಂಡಿಎಸ್ 2010, ಬೆಂಗಳೂರು, ದಿನಾಂಕ 24–07–2010**

ಎಲ್ಲಾ ವಿದ್ಯಾರ್ಥಿನಿಲಯಗಳಲ್ಲಿ ಮತ್ತು ವಸತಿ ಶಾಲೆಗಳಲ್ಲಿರುವ ವಿದ್ಯಾರ್ಥಿ/ವಿದ್ಯಾರ್ಥಿನಿಯರಿಗೆ ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮದಿಂದ ಅನುಬಂಧ–1 ರಲ್ಲಿ ನೀಡಿದ ಮಾದರಿ (Specification) ಬಟ್ಟೆಯನ್ನು ಅವುಗಳ ಮುಂದೆ ನಮೂದಿಸಿರುವ ದರದಲ್ಲಿ ಸರಬರಾಜು ಮಾಡಲು ಈ ಕೆಳಕಂಡ ಷರತ್ತುಗಳಂತೆ ಅನುಮೋದನೆ ನೀಡಲಾಗಿದೆ. ವಿವಿಧ ತರಗತಿ ವಿದ್ಯಾರ್ಥಿಗಳಿಗೆ ಬೇಕಾಗುವ ಬಟ್ಟೆ ಪ್ರಮಾಣ ಅನುಬಂಧ–2ರಲ್ಲಿ ನೀಡಲಾಗಿದೆ.

1) ಬಟ್ಟೆಯನ್ನು ವಿದ್ಯಾರ್ಥಿನಿಲಯ/ವಸತಿ ಶಾಲೆವಾರು ಬೇಡಿಕೆ ಅನುಸಾರ ಬಂಡಲ್ ಮಾಡಿ ತಾಲ್ಲೂಕುವಾರು, ಕರ್ನಾಟಕ ಕೈ ಮಗ್ಗ ಅಭಿವೃದ್ಧಿ ನಿಗಮದವರು ಅವರ ಖರ್ಚಿನಲ್ಲಿಯೇ ಸರಬರಾಜು ಮಾಡುವುದು.
2) ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮದವರು ಇಂಡೆಂಟ್ ಪಡೆದ ತಕ್ಷಣ ಬಟ್ಟೆಯ ಸರಬರಾಜು ಪ್ರಾರಂಭಿಸಿ ಎಲ್ಲರಿಗೂ 3 ತಿಂಗಳೊಳಗಾಗಿ ಸರಬರಾಜು ಮಾಡುವುದು.
3) 2010–11ನೇ ಸಾಲಿಗೆ ಸರಬರಾಜು ಮಾಡಿದ ಬಟ್ಟೆಯ ಹಣವನ್ನು ಒಂದು ತಿಂಗಳೊಳಗಾಗಿ ಪಾವತಿಸುವುದು.
4) ವಿದ್ಯಾರ್ಥಿನಿಲಯ/ವಸತಿ ಶಾಲೆಗಳ ವಿದ್ಯಾರ್ಥಿಗಳಿಗೆ ಸಮವಸ್ತ್ರವನ್ನು ಸ್ಥಳೀಯವಾಗಿ ವಾರ್ಡನ್/ಮೇಲ್ವಿಚಾರಕರು ದರಪಟ್ಟಿ/ಟೆಂಡರ್ ಕರೆದು ದರ ನಿಗದಿಪಡಿಸಿ ಎಲ್ಲಾ ವಿದ್ಯಾರ್ಥಿಗಳ ಅಳತೆಗಳನ್ನು ಪಡೆದು ಬಟ್ಟೆಯನ್ನು ಹೊಲಿಸಿ ವಿದ್ಯಾರ್ಥಿಗಳಿಗೆ ವಿತರಿಸುವುದು.
5) ಮೊರಾರ್ಜಿ ದೇಸಾಯಿ ಹಾಗೂ ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆಗಳಿಗೆ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದವರು ನೀಡಿದ ಮಾದರಿಯಲ್ಲಿಯೇ ಹೊಲಿಸತಕ್ಕದ್ದು.
6) ಪ್ರತಿ ವಿದ್ಯಾರ್ಥಿಗೆ ಸಮವಸ್ತ್ರದ ವೆಚ್ಚ– ಈ ಕೆಳಗಿನಂತಿದೆ.

| ಇಲಾಖೆ | ಪ್ರತಿ ವಿದ್ಯಾರ್ಥಿ/ವಿದ್ಯಾರ್ಥಿನಿಯರ ನಿಗದಿಪಡಿಸಿದ ವೆಚ್ಚ | ಸಮವಸ್ತ್ರದ ಸೌಲಭ್ಯ |
|---|---|---|
| ಹಿಂದುಳಿದ ವರ್ಗಗಳ ಇಲಾಖೆ | ರೂ400.00 | ಎರಡು ಜೊತೆ ಪ್ರತಿ ವರ್ಷ |
| ಪರಿಶಿಷ್ಟ ಪಂಗಡಗಳ ಇಲಾಖೆ | ರೂ.500.00 | ಅದೇ |
| ಪರಿಶಿಷ್ಟ ಜಾತಿ | ರೂ.400.00 | ಅದೇ |
| ಎಂ.ಡಿ.ಆರ್/ಕೆ.ಆರ್.ಸಿ.ಆರ್.ಎಸ್ | ರೂ.800.00 | ಎರಡು ಜೊತೆ ಪ್ರತಿ ವರ್ಷ ಹಾಗೂ ಬೂಟು, ಸಾಕ್ಸ್ ಬೆಲ್ಟ್, ಟೈ ಮತ್ತು ಬ್ಯಾಡ್ಜ್ |

7) ಸಮವಸ್ತ್ರದ ವೆಚ್ಚವನ್ನು ಆಯವ್ಯಯದಲ್ಲಿ ಲಭ್ಯವಾಗುವ ಹಣದಿಂದ ಭರಿಸುವುದು. ಇದಕ್ಕಿಂತ ಹೆಚ್ಚಿನ ವೆಚ್ಚ ಬಂದಲ್ಲಿ ಆಯಾ ಇಲಾಖೆಗಳು ಹೆಚ್ಚಿನ ವೆಚ್ಚವನ್ನು ಭರಿಸುವುದು. ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಆಗುವ ಹೆಚ್ಚುವರಿ ವೆಚ್ಚವನ್ನು ಎಸ್.ಸಿ.ಎಸ್.ಪಿ/ಟಿ.ಎಸ್.ಪಿ. ಕ್ರೋಢೀಕರಿಸಿದ (Pooled fund) ಅನುದಾನದಿಂದ ಭರಿಸುವುದು.
8) ಕೆ.ಹೆಚ್.ಡಿ.ಸಿ. ಬಟ್ಟೆಯ ಸ್ಯಾಂಪಲ್ ಒದಗಿಸಿ ಅದರಂತೆ ಸ್ಪೆಸಿಫಿಕೇಷನ್ ಪ್ರಕಾರ ಸರಬರಾಜು ಮಾಡುವುದು. ಇಲಾಖೆಯ ಮುಖ್ಯಸ್ಥರು / ಜಿಲ್ಲಾ ಅಧಿಕಾರಿಗಳು ಬಟ್ಟೆಯನ್ನು ಸರಬರಾಜು ಮಾಡುವಾಗ ಸ್ಯಾಂಪಲ್ ತೆಗೆದುಕೊಂಡು ಪರೀಕ್ಷೆಗೆ ಒಳಪಡಿಸಿ ಗುಣಮಟ್ಟದ ಬಗ್ಗೆ ಖಾತರಿ ಪಡಿಸಿಕೊಳ್ಳತಕ್ಕದ್ದು.
9) ಇಲಾಖಾ ಮುಖ್ಯಸ್ಥರು ಇದರ ಬಗ್ಗೆ ಕೂಡಲೇ ಕ್ರಮ ವಹಿಸಿ ಸಮವಸ್ತ್ರಗಳನ್ನು ಸಕಾಲದಲ್ಲಿ ಒದಗಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಎಂ. ಎಂ. ಭಾಟೆ

ಸರ್ಕಾರದ ಅಧೀನ ಕಾರ್ಯದರ್ಶಿ–3

ಸಮಾಜ ಕಲ್ಯಾಣ ಇಲಾಖೆ

ಅನುಬಂಧ–1

ವಿವಿಧ ತರಗತಿ ವಿದ್ಯಾರ್ಥಿಗಳಿಗೆ ಬೇಕಾಗುವ ಬಟ್ಟೆಯ ಸ್ಪೆಸಿಫಿಕೇಷನ್ಸ್ ಮತ್ತು ದರ:–

| | | |
|---|---|---|
| 1) ಸಮಾಜ ಕಲ್ಯಾಣ ಇಲಾಖೆ<br><br>3) ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ<br>4) ಪರಿಶಿಷ್ಠ ವರ್ಗಗಳ ಕಲ್ಯಾಣ ಇಲಾಖೆಗಳ ವಿದ್ಯಾರ್ಥಿ ನಿಲಯಗಳ ವಿದ್ಯಾರ್ಥಿಗಳಿಗೆ | ಬಾಲಕರಿಗೆ<br><br><br><br><br><br><br><br><br>¨ಬಾಲಕಿಯರಿಗೆ | 2) ಹಾಫ್ ಪ್ಯಾಂಟ್ ಹಾಗೂ ಫುಲ್ ಪ್ಯಾಂಟ್– ನೆವಿ ಬ್ಲೂ ಸೂಟಿಂಗ್<br>(2/30spcx2/30spc-137cms width) 67% polyster, 33% cotton.<br>Rate per meter Rs. 90/-<br>2) ಬುಷ್ ಶರ್ಟ್–ಲೈಟ್‌ಬ್ಲೂ ಶರ್ಟಿಂಗ್<br>(2/80spcx2/80spc-89cms width) 67% polyster, 33% cotton.<br>Rate per meter Rs. 62/-<br>1)ಸ್ಕರ್ಟ್– ನೆವಿ ಬ್ಲೂ ಬಣ್ಣ<br>(2/30spcx2/30spc-137cms width) 67% polyster, 33% cotton blend.<br>Rate per meter Rs.90/-<br>2) ಉದ್ದಲಂಗ – ನೆವಿ ಬ್ಲೂ ಬಣ್ಣ<br>(Casement(20sx20s/90cms width) ಪ್ರತಿ ಮೀಟರಿಗೆ ದರ 42/–<br>3) ಉದ್ದಲಂಗದ ಬಾಡಿಕ್ಲಾತ್–ಬಿಳಿ ಬಣ್ಣ<br>(Casement(20sx20s/90cms width) ದರ 42/–<br>5) ಬ್ಲೌಸ್–ಲೈಟ್ ಬ್ಲೂ ಶರ್ಟಿಂಗ್ ಬಟ್ಟೆ<br>2.80spcx2/80spc 67% polyster, 33% cotton. Width<br>ದರ ಪ್ರತಿ ಮೀಟರ್‌ಗೆ ರೂ.62/– |
| ಮೊರಾರ್ಜಿ ದೇಸಾಯಿ / ಕಿತ್ತೂರು ರಾಣಿ ಚೆನ್ನಮ್ಮ / ಏಕಲವ್ಯ ವಸತಿ ಶಾಲೆಗಳಿಗೆ | ಬಾಲಕರಿಗೆ | ಫುಲ್ ಪ್ಯಾಂಟ್–ಬ್ರೌನ್ ಸೂಟಿಂಗ್<br>(2/30spcx2/30spc-137cms width) 67% polyster, 33% cotton blend.<br>Rate per meter Rs.90/-width<br>ಆಫ್ ಸ್ಲೀವ್ ಶರ್ಟ್– Fawn colour<br>2/80spcx2/80spc-89cms width) 67% polyster, 33% cotton.<br>Rate per meter Rs.62/- |
| | ಬಾಲಕಿಯರಿಗೆ | 1) ಸ್ಕರ್ಟ್– ಬ್ರೌನ್ ಸೂಟಿಂಗ್<br>2/30spcx2/30spc-137cms width) 67% polyster, 33% cotton blend.<br>Rate per meter Rs.90/- |
| | | 2)ಆಫ್ ಸ್ಲೀವ್ ಶರ್ಟ್– Fawn colour<br>2/80spcx2/80spc-89cms width) 67% polyster, 33% cotton.<br>Rate per meter Rs.62/-<br>3)ಚೂಡಿದಾರ್– ಪ್ಯಾಂಟ್ – ಬ್ರೌನ್ ಕಲರ್ ಕೇಸ್ ಮೆಂಟ್ (20x20s/90cms width) ಪ್ರತಿ ಮೀಟರ್‌ಗೆ ದರ ರೂ.42/–<br>ಸಲ್ವಾರ್ – ಫಾನ್ ಕಲರ್ ಶರ್ಟಿಂಗ್ ಬಟ್ಟೆ.<br>Fawn colour<br>2/80spcx2/80spc-89cms width) 67% polyster, 33% cotton.<br>Rate per meter Rs.62/–ದುಪ್ಪಟ (ವೇಲ್) ಬ್ರೌನ್ ಕಲರ್ |

ಎಂ. ಎಂ. ಬಾಟೆ
ಸರ್ಕಾರದ ಅಧೀನ ಕಾರ್ಯದರ್ಶಿಗಳು
ಸಮಾಜ ಕಲ್ಯಾಣ ಇಲಾಖೆ

**ಅನುಬಂಧ–2**

ವಿವಿಧ ತರಗತಿ ವಿದ್ಯಾರ್ಥಿಗಳಿಗೆ ಬೇಕಾಗುವ ಬಟ್ಟೆ ಪ್ರಮಾಣ:–

| ಸಮವಸ್ತ್ರದ ಮಾದರಿ ಬಾಲಕರಿಗೆ | ತರಗತಿ | ಬೇಕಾಗುವ ಬಟ್ಟೆ ಪ್ರಮಾಣ(ಮೀಟರ್‌ಗಳಲ್ಲಿ) | ಎರಡು ಜೊತೆಗೆ ಬೇಕಾಗುವ ಬಟ್ಟೆ ಪ್ರಮಾಣ (ಮೀಟರ್‌ಗಳಲ್ಲಿ) |
|---|---|---|---|
| ಆಫ್ ಪ್ಯಾಂಟ್ | ವಿದ್ಯಾರ್ಥಿನಿಲಯ– 1ನೇ ತರಗತಿಯಿಂದ 4ನೇ ತರಗತಿ ವರೆಗೆ | 0.50 | 1.00 |
| ಆಫ್ ಶರ್ಟ್ | –ಅದೇ– | 1.25 | 2.50 |
| ಆಫ್ ಪ್ಯಾಂಟ್ | 5ನೇ ತರಗತಿಯಿಂದ 7ನೇ ತರಗತಿವರೆಗೆ | 0.60 | 1.20 |
| ಆಫ್ ಶರ್ಟ್ | –ಅದೇ– | 1.50 | 3.00 |
| ಫುಲ್ ಪ್ಯಾಂಟ್ | 8ನೇ ತರಗತಿಯಿಂದ 10ನೇ ತರಗತಿವರಗೆ | 1.20 | 2.40 |
| ಆಫ್ ಶರ್ಟ್ | –ಅದೇ– | 1.75 | 3.50 |
| ಫುಲ್ ಪ್ಯಾಂಟ್ | ಎಂ.ಡಿ.ಆರ್. 6ನೇತರಗತಿಯಿಂದ 7ನೇ ತರಗತಿಯವರೆಗೆ | 1.00 | 2.00 |
| ಆಫ್ ಶರ್ಟ್ | – ಅದೇ – | 1.50 | 3.00 |
| ಫುಲ್ ಪ್ಯಾಂಟ್ | 8ನೇ ತರಗತಿಯಿಂದ 10ನೇ ತರಗತಿಯವರೆಗೆ | 1.20 | 2.40 |
| ಆಫ್ ಶರ್ಟ್ | –ಅದೇ– | 1.80 | 3.60 |
| ಬಾಲಕಿಯರಿಗೆ | | | |
| ಸ್ಕರ್ಟ್ | ವಿದ್ಯಾರ್ಥಿನಿಲಯ– 1ನೇ ತರಗತಿಯಿಂದ 4ನೇ ತರಗತಿವರೆಗೆ | 1.25 | 2.50 |
| ಶರ್ಟ್ | –ಅದೇ– | 1.10 | 2.20 |
| ಸ್ಕರ್ಟ್ | 5ನೇ ತರಗತಿಯಿಂದ 7ನೇ ತರಗತಿವರೆಗೆ | 1.70 | 3.40 |
| ಶರ್ಟ್ | –ಅದೇ– | 1.35 | 2.70 |
| ಸ್ಕರ್ಟ್ | 8ನೇ ತರಗತಿಯಿಂದ 10ನೇ ತರಗತಿವರೆಗೆ | 1.90 | 3.80 |
| ಶರ್ಟ್ | –ಅದೇ– | 1.50 | 3.00 |
| ಸ್ಕರ್ಟ್ | ಎಂ.ಡಿ.ಆರ್. 6ನೇ ತರಗತಿಯಿಂದ 7ನೇ ತರಗತಿವರೆಗೆ | 1.45 | 2.90 |
| ಶರ್ಟ್ | –ಅದೇ– | 1.50 | 3.00 |
| ಸ್ಕರ್ಟ್ | 8ನೇ ತರಗತಿಯಿಂದ 10ನೇ ತರಗತಿವರೆಗೆ | 1.75 | 3.50 |
| ಶರ್ಟ್ | –ಅದೇ– | 1.75 | 3.50 |
| ಚೂಡೀದಾರ್–ಟಾಪ್ (ಅಲ್ಪ ಸಂಖ್ಯಾತರ ಶಾಲೆಗಳಲ್ಲಿ) | ಎಂ.ಡಿ.ಆರ್.6ನೇ ತರಗತಿಯಿಂದ 7ನೇ ತರಗತಿವರೆಗೆ | 1.90 | 3.80 |
| ಡು– ಬಾಟಂ/ ಪ್ಯಾಂಟ್ | –ಅದೇ– | 2.00 | 4.00 |
| ಚೂಡೀದಾರ್– ಟಾಪ್ –ಸಲ್ವಾರ್ (ಅಲ್ಪ ಸಂಖ್ಯಾತರ ಶಾಲೆಗಳಲ್ಲಿ) | ಎಂ.ಡಿ.ಆರ್.8ನೇ ತರಗತಿಯಿಂದ 10ನೇ ತರಗತಿವರೆಗೆ | 2.00 | 4.00 |
| ಡು– ಬಾಟಂ/ ಪ್ಯಾಂಟ್ | –ಅದೇ– | 2.00 | 4.00 |

ಎಂ. ಎಂ. ಭಾಟೆ

ಪಿ.ಆರ್. ನಂ 2105

ಸರ್ಕಾರದ ಅಧೀನ ಕಾರ್ಯದರ್ಶಿ–3

ಸಮಾಜ ಕಲ್ಯಾಣ ಇಲಾಖೆ